# ಕರ್ನಾಟಕ ಚರಿತ್ರೆಯ ಪ್ರಮುಖ ಇತಿಹಾಸ ತಜ್ಞರು

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ
ಎಂ.ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

**ಸಂಜೀವಕುಮಾರ. ಹಣಮಂತ**

ಸಂಶೋಧನ ಮಾರ್ಗದರ್ಶಕರು

**ಡಾ|| ಕೆ. ನಾಗವನಜ**
ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ
ಬೀದರ

ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಶೋಧನಾ ನಿಬಂಧ
ಚರಿತ್ರೆ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ - ೫೮೩ ೨೭೬
ಸೆಪ್ಟೆಂಬರ್ - ೨೦೦





# ಕರ್ನಾಟಕ ಚರಿತ್ರೆಯ ಪ್ರಮುಖ ಇತಿಹಾಸ ತಜ್ಞರು

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ
ಎಂ.ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)



ಸಂಶೋಧಕರು

ಸಂಜೀವಕುಮಾರ. ಹಣಮಂತ.

ಸಂಶೋಧನ ಮಾರ್ಗದರ್ಶಕರು
ಡಾ. ಕೆ. ನಾಗವನಜ

ಕ.ರಾ.ಶಿ. ಸಂಸ್ಥೆಯ
ಸ್ನಾತಕೋತರ ಕನ್ನಡ ಸಂಶೋಧನ ಕೇಂದ್ರ
ಬೀದರ




ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಶೋಧನಾ ನಿಬಂಧ
ಚರಿತ್ರೆ ಅಧ್ಯಯ ವಿಭಾಗ,

ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ-೫೮೩ ೨೭೬
ಸೆಪ್ಟೆಂಬರ್-೨೦೦೬

# ಘೋಷಣಾ ಪತ್ರ

"ಕರ್ನಾಟಕ ಚರಿತ್ರೆಯ ಪ್ರಮುಖ ಇತಿಹಾಸ ತಜ್ಞರು" ಎಂಬ ನಿಬಂಧವನ್ನು ನಾನು ಡಾ॥ ಕೆ. ನಾಗವನಜ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಇದನ್ನು ಇಡಿಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿಲ್ಲವೆಂದು ಪ್ರಮಾಣೀಕರಿಸುತ್ತ, ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಸಾದರ ಪಡಿಸುತ್ತಿದ್ದೇನೆ.

ಸ್ಥಳ : ಬೀದರ
ದಿನಾಂಕ: 01-10-2009

ಸಂಜೀವಕುಮಾರ ಹಣಮಂತ
ಸಂಶೋಧನಾ ವಿದ್ಯಾರ್ಥಿ
ಕ.ರಾ.ಶಿ. ಸಂಸ್ಥೆ,
ಸ್ನಾತಕೋತ್ತರ ಕನ್ನಡ ಸಂಶೋಧನಾ ಕೇಂದ್ರ
ಬೀದರ

# ಪ್ರಮಾಣ ಪತ್ರ

ಶ್ರೀ ಸಂಜೀವಕುಮಾರ್. ಹಣಮಂತ. ಇವರು ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ಅಧ್ಯಯನ ವಿಭಾಗದಲ್ಲಿ ಸಂಶೋಧನೆ ಕೈಗೊಂಡ **"ಕರ್ನಾಟಕ ಚರಿತ್ರೆಯ ಪ್ರಮುಖ ಇತಿಹಾಸ ತಜ್ಞರು"** ಎಂಬ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಿಪಡಿಸಿದ್ದಾರೆ. ಇದು ಇವರ ಮೂಲ ನಿಬಂಧವಾಗಿದ್ದು, ಈ ಮೊದಲು ಇದು ಇಡಿಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸಲಾಗಿದೆ.

ಸ್ಥಳ : ಬೀದರ
ದಿನಾಂಕ: 01-10-2019

**ಡಾ॥ ಕೆ. ನಾಗವನಜ**
ಮಾರ್ಗದರ್ಶಕರು,
ಕ.ರಾ.ಶಿ. ಸಂಸ್ಥೆ,
ಸ್ನಾತಕೋತ್ತರ ಕನ್ನಡ ಸಂಶೋಧನಾ ಕೇಂದ್ರ
ಬೀದರ

# ಪರಿವಿಡಿ

ಅಧ್ಯಾಯ-೧

# ಪ್ರವೇಶ, ಅಧ್ಯಯನದ ಪ್ರಾಮುಖ್ಯತೆ, ಉದ್ದೇಶ ಮತ್ತು ವ್ಯಾಪ್ತಿ

ಇತಿಹಾಸ ಲೇಖನ ಕಲೆಯು ಇತಿಹಾಸ ಅಧ್ಯಯನದ ಒಂದು ಭಾಗ. ಅನೇಕ ಇತಿಹಾಸಕಾರರು, ಸಂಶೋಧಕರು, ಕರ್ನಾಟಕ ಇತಿಹಾಸವನ್ನು ರಚಿಸಿದ್ದಾರೆ. ಪ್ರಾಚೀನ ಕಾಲದಿಂದಲೂ ಕರ್ನಾಟಕ ಇತಿಹಾಸದ ಸಂಶೋಧನ ಮತ್ತು ರಚನೆಕಾರ್ಯ ನಡೆಯುತ್ತಲೇ ಬಂದಿದೆ. ಇಂದು ಸಮಗ್ರ ಕರ್ನಾಟಕ ಇತಿಹಾಸ ರಚನೆಯಾಗಿದೆ. ಇದು ಕರ್ನಾಟಕ ಇತಿಹಾಸ ರಚನಾಕಾರರ ಕೊಡುಗೆಯಾಗಿದೆ. ಇಂತಹ ಸಮಗ್ರ ಕರ್ನಾಟಕ ಇತಿಹಾಸಕ್ಕೆ ಕೊಡುಗೆ ನೀಡಿದ ಇತಿಹಾಸಕಾರರ ಬಗ್ಗೆ ತಿಳಿದುಕೊಳ್ಳುವುದು ಅತೀ ಅವಶ್ಯಕವಾಗಿದೆ. ತೆರೆಮರೆಯಲ್ಲಿದ್ದು ಕರ್ನಾಟಕ ಇತಿಹಾಸದ ಅನೇಕ ವಿಷಯಗಳನ್ನು ರಚಿಸಿ ಕಣ್ಮರೆಯಾದ ಇತಿಹಾಸಕಾರರ ಬಗ್ಗೆ ತಿಳಿದುಕೊಳ್ಳುವುದು, ನೆನಪಿಸಿಕೊಳ್ಳುವುದು ಅತೀ ಅವಶ್ಯಕವಾಗಿದೆ. ಆದುದರಿಂದ ನಾನು ಈ ವಿಷಯವನ್ನು ಎಂ.ಫಿಲ್. ಪದವಿಗೆ ಆಯ್ದುಕೊಂಡು ಪ್ರಬಂಧ ರೂಪದಲ್ಲಿ ಪ್ರಸ್ತುತ ಪಡಿಸಬೇಕೆಂದಿದ್ದೇನೆ.

ನಮ್ಮ ಕರ್ನಾಟಕ ಭಾರತದ ಇತಿಹಾಸದಲ್ಲೇ ಗಣನೀಯವಾದ ಸಾಧನೆಯನ್ನು ಮಾಡಿದೆ. ಇಂತಹ ನಾಡಿನ ಕುರಿತು ಅಧ್ಯಯನ ಮಾಡಿದ ಪ್ರಮುಖ ಇತಿಹಾಸಕಾರರ ಬಗ್ಗೆ ನಾನು ತಿಳಿದುಕೊಂಡು, ಇನ್ನೊಬ್ಬರಿಗೆ ತಿಳಿಸುವುದೇ ನನ್ನ ಅಧ್ಯಯನದ ಗುರಿ. ನಮ್ಮ ಕರ್ನಾಟಕದ ಪ್ರಾಚೀನ ಇತಿಹಾಸ ಕಾಲವನ್ನು ಕ್ರಿಪೂ. ೩೦೦ ಕ್ಕೆ ಒಯ್ಯಬಹುದಾಗಿದೆ. ಶಾತವಾಹನರಿಂದ ಹಿಡಿದು ೧೯೪೭ ರಲ್ಲಿ ಕೊನೆಗೊಂಡ ಮೈಸೂರು ಒಡೆಯರವರೆಗೂ ಈ ನಾಡಿನಲ್ಲಿ ವಿವಿಧ ರಾಜಮನೆತನಗಳು ಆಡಳಿತ ಮಾಡಿದ್ದಾರೆ. ಇಂತಹ ಸುದೀರ್ಘವಾದ ಇತಿಹಾಸ ಹೊಂದಿದ ನಮ್ಮ ನಾಡಿನಲ್ಲಿ ಎಂತಹ ವ್ಯವಸ್ಥೆ ಇತ್ತು, ಹೇಗೆ ಇತ್ತು ಎಂಬುದನ್ನು ನಮ್ಮ ಕರ್ನಾಟಕ ಪ್ರಮುಖ ಇತಿಹಾಸಕಾರರಾದ ಬಿ.ಎಲ್. ರೈಸ್ ಫ್ಲೀಟ್, ಬಿ.ಎಸ್. ಸಾಲೆತೊರೆ, ಎಂ.ಎಸ್. ಕೃಷ್ಣಾ, ಆರ್.ಆರ್. ದಿವಾಕರ್, ಕೆ.ಎ. ನೀಲಕಂಠ ಶಾಸ್ತ್ರಿ, ಪಿ.ಬಿ. ದೇಸಾಯಿ ಮುಂತಾದ ಇತಿಹಾಸಕಾರರು ನಮ್ಮ ನಾಡಿನ ಬಗ್ಗೆ ತಿಳಿಸಿಕೊಟ್ಟಿದ್ದಾರೆ. ಅಂತಹ ಪ್ರಮುಖ ಇತಿಹಾಸಕಾರರ ಕುರಿತು ನಾನು ಅಧ್ಯಯನ ಮಾಡಿದ್ದು ನನ್ನ ಸೌಭಾಗ್ಯ.

ಕರ್ನಾಟಕ ಚರಿತ್ರೆಯಲ್ಲಿ ಮೊಟ್ಟಮೊದಲು ಶಾಸನಗಳ ಕುರಿತು ಅಧ್ಯಯನ ಮಾಡಿ ಶಾಸನಗಳ ಪಿತಾಮಹಾನೆಂದು ಬಿರುದು ಪಡೆದವರು ಬಿ.ಎಲ್. ರೈಸರವರು. ಅವರು ಈ ಶಾಸನಗಳನ್ನು ಅಧ್ಯಯನ ಮಾಡಲು ಹೊರಟಾಗ ಬಹಳ ಕಷ್ಟಗಳನ್ನು ಎದುರಿಸುವುದರ ಮೂಲಕ ಅವರು ಕುದುರೆಯ ಮೇಲೆ ಸವಾರಿ ಮಾಡಿ ಶಾಸನಗಳನ್ನು ಸಂಗ್ರಹಿಸಿ ಅಧ್ಯಯನ ಮಾಡಿದ್ದರು. ಇಂತಹ ಮಹಾನ್ ಪ್ರಮುಖ

ಇತಿಹಾಸಕಾರರ ಬಗ್ಗೆ ನಾವು ಇನ್ನೂ ಹೆಚ್ಚಿನ ನಿಟ್ಟಿನಲ್ಲಿ ತಿಳಿದುಕೊಂಡರೆ ಒಳ್ಳೆಯದಾಗುತ್ತದೆ. ಏಕೆಂದರೆ ಇವರ ಜೀವನ, ಚರಿತ್ರೆ, ಕೃತಿಗಳು, ಸಾಧನೆಗಳು ಇವೆಲ್ಲ ಅಧ್ಯಯನ ಮಾಡಿದಾಗ ನಮ್ಮ ಜೀವನದ ಮೇಲೆ ಸ್ವಲ್ಪ ಮಟ್ಟಿಗೆ ಬೆಳಕು ಚೆಲ್ಲುತ್ತದೆ.

ಈ ಕರ್ನಾಟಕ ಚರಿತ್ರೆಯ ಪ್ರಮುಖ ಇತಿಹಾಸಕಾರರಿಗೆ ಸಂಬಂಧಿಸಿದಂತೆ ಅನೇಕ ಆಧಾರ ಗ್ರಂಥಗಳಿಂದ ಮಾಹಿತಿ ಸಂಗ್ರಹಣೆ ಮತ್ತು ಸಂದರ್ಶನ, ಭಾವಚಿತ್ರಗಳ ಸಂಗ್ರಹಣೆ ಇವೆಲ್ಲ ಮಾಹಿತಿ ಸಂಗ್ರಹಣೆಯ ನಂತರ ಕಾಲಾನುಕ್ರಮವಾಗಿ ವಿಂಗಡಿಸಿ, ಜೋಡಿಸಿ ತುಲನಾತ್ಮಕವಾಗಿ, ಸಂಶೋಧನಾತ್ಮಕವಾಗಿ ಈ ಗ್ರಂಥದಲ್ಲಿ ಮಂಡಿಸಲಾಗಿದೆ. ಹಾಗೂ ಅಂತರಜಾಲ ಮಾಹಿತಿ ಸಂಗ್ರಹಣೆ, ಟಿಪ್ಪಣಿಗಳು ಮಾಡಿಕೊಳ್ಳುವುದರ ಮೂಲಕ ವಿಷಯಗಳು ಸಂಗ್ರಹಣೆ ಮಾಡಿ ಈ ಪ್ರಬಂಧವನ್ನು ಮಂಡಿಸುತ್ತಿದ್ದೇನೆ.

ಇಲ್ಲಿಯವರೆಗೂ ಹಲವಾರು ಸಂಶೋಧನ ವಿದ್ಯಾರ್ಥಿಗಳು, ಹಲವಾರು ವಿಷಯಗಳ ಕುರಿತು ಅಧ್ಯಯನ ಮಾಡಿ ತಮ್ಮ ಎಮ್.ಫಿಲ್. ಮತ್ತು ಪಿ.ಹೆಚ್.ಡಿ. ಪದವಿಗಳಲ್ಲಿ ಅವರು ಪ್ರತ್ಯೇಕವಾಗಿ ಒಂದು ರಾಜ ಮನೆತನ, ಕೋಟೆಗಳು, ಜೀವನ ಚರಿತ್ರೆಗಳು, ದೇವಾಲಯಗಳು ಇವೆಲ್ಲ ಆಯ್ಕೆ ಮಾಡಿಕೊಂಡು ಅವರು ತಮ್ಮ ಪ್ರಬಂಧವನ್ನು ಮಂಡಿಸುತ್ತಾರೆ. ಆದರೆ ನಾನು ಕರ್ನಾಟಕ ಚರಿತ್ರೆಯನ್ನು ಬರೆದ ಹಲವಾರು ಚರಿತ್ರೆಕಾರರನ್ನು ಎಂ.ಫಿಲ್. ಪದವಿಯ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು ಪ್ರಬಂಧವನ್ನು ಬರೆಯುತ್ತಿದ್ದೇನೆ. ಅಂದರೆ ಈ ಕರ್ನಾಟಕ ಚರಿತ್ರೆಯ ಪ್ರಮುಖ ಇತಿಹಾಸಕಾರರ ಜೀವನ ಸಾಧನೆಗಳನ್ನು ಅಧ್ಯಯನ ಮಾಡಿ, ಪ್ರಬಂಧ ರಚಿಸುವುದರ ಮೂಲಕ ಎಲ್ಲರ ಬೆಳಕಿಗೆ ತರುವುದು ನನ್ನ ಎಂ.ಫಿಲ್. ಪದವಿಯ ಗುರಿಯಾಗಿರುತ್ತದೆ. ಕರ್ನಾಟಕ ಚರಿತ್ರೆಕಾರರ ಅಧ್ಯಯನ ಮಾಡುವ ಸಂದರ್ಭದಲ್ಲಿ ಬಹುತೇಕ ಆಧಾರವಾಗಿಟ್ಟುಕೊಂಡು ಅಧ್ಯಯನ ಮಾಡುತ್ತಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಹಲವಾರು ಲಿಖಿತ ಆಧಾರಗಳನ್ನಿಟ್ಟುಕೊಂಡು ಪ್ರಮುಖ ಚರಿತ್ರೆಕಾರರ ಕುರಿತು ಅಧ್ಯಯನ ಮಾಡಲು ಪ್ರಮುಖ ಆಧಾರಗಳು ನನಗೆ ಸಹಾಯಕವಾಗಿವೆ. ಪ್ರಸ್ತುತ ಅಧ್ಯಯನವು ಹಿಂದೆ ವಿವರಿಸಲಾದ ಅನೇಕ ಬಗೆಯ ತಾರ್ಕಿಕ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಹೊಸ ಬಗೆಯ ಚರಿತ್ರೆಯ ಇನ್ನೊಂದು ಮಗ್ಗುಲನ್ನು ಅಭ್ಯಾಸ ಮಾಡಿ ಜನಸಾಮಾನ್ಯರಿಗೆ ತಿಳಿಸಲು ಪ್ರಯತ್ನಿಸಿದೆ. ಹಾಗಾಗಿ ನಾವು ಹಲವಾರು ಪ್ರಮುಖ ಕರ್ನಾಟಕ ಚರಿತ್ರೆಕಾರರು ರಚಿಸಿದ ಕರ್ನಾಟಕ ನಾಡು ಹರಿದು ಹಂಚಿಹೋದ ನಮ್ಮ ನಾಡಿನ ಕುರಿತು ಅವರು ಹೇಗೆ ಅಧ್ಯಯನ ಮಾಡಿದರು ಮತ್ತು ಸಂಶೋಧನೆ ಮಾಡಿದರು ಎಂಬುದನ್ನು ಆಧಾರವಾಗಿಟ್ಟುಕೊಂಡು ನಾನು ಅಧ್ಯಯನ ಮಾಡುತ್ತಿದ್ದೇನೆ.

ಇತಿಹಾಸಕಾರರ ಬಗ್ಗೆ ಅನೇಕರು ತಮ್ಮ ಸಂಶೋಧನಾತ್ಮಕವಾಗಿ ಹಲವಾರು ಗ್ರಂಥಗಳನ್ನು ರಚಿಸಿದ್ದಾರೆ. ಇಂತಹ ಗ್ರಂಥಗಳನ್ನು ರಚನೆ ಮಾಡಿದವರೆಂದರೆ ಫಾಲಾಕ್ಷ, ಡಿ.ಎ.ವಿ. ವೆಂಕಟರತ್ನಂ, ಡಾ॥ ಎಮ್.ಬಿ. ಪದ್ಮಾ, ಡಾ॥ ಸುಮಾ ಶಂಕರ, ರಾಜಪ್ಪ ದಳವಾಯಿ, ಮಜುಮದಾರ, ಸಿ.ಆರ್. ಭಾರತ್ವಾಜ, ಆರ್.ಕೆ. ಚೌಧರಿ ಮುಂತಾದವರು ಹಲವಾರು ಇತಿಹಾಸಕಾರರ ಕುರಿತು ಗ್ರಂಥಗಳನ್ನು ರಚಿಸಿದ್ದಾರೆ. ಆದರೆ ಅವರು ಪ್ರಪಂಚದ ಇತಿಹಾಸಕಾರರ ಮತ್ತು ಭಾರತದ ಇತಿಹಾಸಕಾರರ ಕುರಿತು ಜೊತೆಗೆ ಅದರಲ್ಲೇ ಕೆಲವು ಪ್ರಾಂತಿಯ ಇತಿಹಾಸಕಾರರ ಕುರಿತು ವರ್ಣಿಸಿದ್ದಾರೆ. ಆದರೆ ನಮಗೆ ನಮ್ಮ ಪ್ರಾಂತಿಯ ಇತಿಹಾಸಕಾರರ ಬಗ್ಗೆ ಪ್ರತ್ಯೇಕವಾಗಿ ತಿಳಿದುಕೊಳ್ಳಬೇಕೆಂದರೆ ಆಧಾರಗಳು ಸಿಗುವುದಿಲ್ಲ. ಹಾಗಾಗಿ ನಮಗೆ ಸಿಗದೇ ಇರುವ ವಿಷಯವನ್ನು ಸಂಶೋಧನೆ ಮಾಡುವುದರ ಮೂಲಕ ಕರ್ನಾಟಕ ಚರಿತ್ರೆಯ ಪ್ರಮುಖ ಇತಿಹಾಸ ತಜ್ಞರು ಕುರಿತು ಅಧ್ಯಯನ ಮಾಡುತ್ತಿದ್ದೇನೆ. ಎಲ್ಲಾ ಪ್ರಾಂತೀಯ ಇತಿಹಾಸಕಾರರನ್ನು ಒಂದೆಡೆ ಸೇರಿಸಿ, ಅದರಲ್ಲಿ ಪ್ರಮುಖ ಇತಿಹಾಸಕಾರರ ಬಗ್ಗೆ ಒಂದು ಪ್ರಬಂಧ ರಚಿಸುತ್ತಿದ್ದೇನೆ. ಅಂದರೆ ಎಲ್ಲಾ ಇತಿಹಾಸಕಾರರು ಸೇರಿಸಿ ಬರೆದ ಗ್ರಂಥಗಳು ನಮಗೆ ಹೆಚ್ಚು ದೊರೆಯುತ್ತವೆ. ಆದರೆ ಕೇವಲ ಕರ್ನಾಟಕ ಇತಿಹಾಸವನ್ನು ರಚಿಸಿದವರು ತುಂಬ ವಿರಳ. ಈ ದಿಶೆಯಲ್ಲಿ ನಾನು ಎಲ್ಲ ಪ್ರಮುಖ ಚರಿತ್ರೆಕಾರರನ್ನು ಒಂದೆಡೆ ಸೇರಿಸಿ ಒಂದು ಪ್ರಬಂಧವನ್ನು ಬರೆಯುತ್ತಿದ್ದೇನೆ. ಈ ಗ್ರಂಥಕ್ಕೆ ತಕ್ಕ ಮಟ್ಟಿನಲ್ಲಿ ಅವರಿಗೆ ಸಂಬಂಧಪಟ್ಟ ಎಲ್ಲಾ ಆಧಾರಗಳನ್ನು ಆಯ್ಕೆ ಮಾಡುವುದರ ಮೂಲಕ ಇಲ್ಲಿ ಅಧ್ಯಯನ ಮಾಡುತ್ತಿದ್ದೇನೆ. ಈ ಪ್ರಾಂತೀಯ ಇತಿಹಾಸಕಾರರ ಕುರಿತು ಗ್ರಂಥ ರಚನೆ ಮಾಡುವಾಗ ಪ್ರಮುಖ ಇತಿಹಾಸಕಾರರು ಬರೆದ ಪುಸ್ತಕಗಳನ್ನು ಆಧಾರವಾಗಿಟ್ಟುಕೊಂಡು ಈ ಪ್ರಬಂಧವನ್ನು ರಚಿಸುತ್ತಿದ್ದೇನೆ. ಪ್ರತ್ಯೇಕವಾಗಿ ಕರ್ನಾಟಕದ ಪ್ರಮುಖ ಇತಿಹಾಸಕಾರರ ಕುರಿತು ಪ್ರಬಂಧವನ್ನು ರಚಿಸುತ್ತಿದ್ದೇನೆ. ಇದಕ್ಕೆ ಹಲವಾರು ಲಿಖಿತ ಆಧಾರಗಳಳು ಸಹಾಯಕವಾಗಿವೆ. ಉದಾಃ ಡಾ॥ ಸುಮಾ ಶಂಕರ್ ಅವರ ಪ್ರಪಂಚದ ಪ್ರಮುಖ ಇತಿಹಾಸಕಾರರು, ಫಾಲಾಕ್ಷ ರವರ ಇತಿಹಾಸ ಮತ್ತು ರಚನೆ ಸಂಶೋಧನೆ ಮಾರ್ಗ. ಈ ಗ್ರಂಥಗಳು ನನಗೆ ಈ ಅಧ್ಯಯನದಲ್ಲಿ ತುಂಬ ಸಹಾಯಕವಾಗಿವೆ.

ಈ ಸಂಶೋಧನೆ ಮಾಡುವುದು ಕೇವಲ ಎಂ.ಫಿಲ್. ಪದವಿ ಆದುದರಿಂದ, ಹಿಂದಿನ ಮತ್ತು ಇತ್ತೀಚಿನ ಕರ್ನಾಟಕದ ಎಲ್ಲಾ ಇತಿಹಾಸಕಾರರನ್ನು ಸಂಪೂರ್ಣವಾಗಿ ಎಲ್ಲರ ಬಗ್ಗೆ ಅಧ್ಯಯನ ಮಾಡಲು ಸಾಧ್ಯವಾಗಲಿಲ್ಲ. ಏಕೆಂದರೆ ಮೊದಲೇ ತಿಳಿಸಿದ ಹಾಗೆ ಇದು ಕೇವಲ ಎಂ.ಫಿಲ್ ಪದವಿಯಾಗಿದ್ದರಿಂದ ಎಷ್ಟು ವಿಷಯ ಬೇಕಾಗಿರುತ್ತದೆಯೋ ಅಷ್ಟು ಆಯ್ಕೆ ಮಾಡಿಕೊಂಡು ಸಂಶೋಧನೆ ಮಾಡುತ್ತಿದ್ದೇನೆ. ಅಂದರೆ ಈ ಪದವಿಯ ಅರ್ಹತೆಗೆ ತಕ್ಕಂತೆ "ಕರ್ನಾಟಕ ಚರಿತ್ರೆಯ ಪ್ರಮುಖ ಇತಿಹಾಸ ತಜ್ಞರು" ಎಂಬ ವಿಷಯ ಆಯ್ಕೆ ಮಾಡಿಕೊಂಡಿರುತ್ತೇನೆ. ಈ ದಿಶೆಯಲ್ಲಿ

ಅಧ್ಯಯನ ಮಾಡುತ್ತಿದ್ದೇನೆ. ಆದರೆ ಇನ್ನೂ ಹಲವಾರು ಇತಿಹಾಸಕಾರರ ಬಗ್ಗೆ ಅಧ್ಯಯನ ಮಾಡಬೇಕಿತ್ತು. ಆದರೆ ಮೇಲೆ ತಿಳಿಸಿದ ಹಾಗೆ ಇದು ಕೇವಲ ಪದವಿಯಾಗಿದ್ದರಿಂದ ಎಲ್ಲರ ಬಗ್ಗೆ ಅಧ್ಯಯನ ಮಾಡಲು ನನಗೆ ಸಮಯ ಆಗಲಿಲ್ಲ. ಆದ್ದರಿಂದ ಕೆಲವರಿಗೆ ಮಾತ್ರ ಈ ವಿಷಯದಲ್ಲಿ ಸೇರಿಸಿಕೊಂಡು ಅವರ ಜೀವನ ಚರಿತ್ರೆ, ಕೃತಿಗಳು, ಅವರ ಐತಿಹಾಸಿಕ ಸಾಧನೆ ಇವೆಲ್ಲವುಗಳು ಸಂಕ್ಷಿಪ್ತವಾಗಿ ಎಲ್ಲಾ ಮಾಹಿತಿ ಮಂಡಿಸಲಾಗಿದೆ.

ಆದರೆ ಇನ್ನು ಕೆಲವು ಇತಿಹಾಸಕಾರರು ಇದ್ದರೆ ನನ್ನ ಸಕಲ ಪ್ರಯತ್ನಗಳಿಗೆ ಮೀರಿಯಾದರೂ ಎಲ್ಲಾ ಇತಿಹಾಸಕಾರರ ಕುರಿತು ಅಧ್ಯಯನ ಮಾಡಲು ನನ್ನ ಇತಿಮಿತಿ ಒಳಗೆ ಬರುತ್ತದೆ. ಈ ವಿಷಯವು ಅಧ್ಯಯನ ಮಾಡಬೇಕಾದರೆ ಅದಕ್ಕೆ ತನ್ನದೇ ಆದ ನಿಟ್ಟಿನಲ್ಲಿ ಒಂದು ಚೌಕಟ್ಟು ಇರುತ್ತದೆ. ಹಾಗಾಗಿ ಸಂಶೋಧಕರು ಆ ಚೌಕಟ್ಟು ದಾಟಿದರೆ ನಮ್ಮ ಸಂಶೋಧನೆಗೆ ಕಳಂಕ ಬರುವುದು ಖಚಿತ. ಪ್ರತಿಯೊಂದು ವಿಷಯದಲ್ಲಿ ಅದಕ್ಕೆ ತಕ್ಕಂತೆ ಇತಿಮಿತಿಗಳು ಇರುವುದು ಸೂಕ್ತವೆನಿಸುತ್ತದೆ. ಒಂದು ವೇಳೆ ಈ ಇತಿಮಿತಿಗಳು ಇರದೇ ಇದ್ದಾಗ ಅಲ್ಲಿ ಸಂಶೋಧನೆಯು ಪರಿಣಾಮಕಾರಿ ಯಾಗಿರುವುದಿಲ್ಲವೆಂದು ಒಪ್ಪಿಕೊಳ್ಳುತ್ತೇನೆ.

**ಪ್ರಬಂಧದ ಯೋಜನೆ :**

ಪ್ರಸ್ತುತ ಈ ಅಧ್ಯಯನವು ಆರು ಅಧ್ಯಯನಗಳನ್ನೊಳಗೊಂಡಿದೆ. ಮೊದಲನೆಯ ಅಧ್ಯಯನವು ಅಧ್ಯಯನದ ಪ್ರಾಮುಖ್ಯತೆ, ವ್ಯಾಪ್ತಿ, ಇತಿಮಿತಿಗಳು, ಪ್ರಬಂಧದ ಯೋಜನೆಯನ್ನು ಕುರಿತದ್ದಾಗಿದೆ. ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಪ್ರಮುಖ ಇತಿಹಾಸಕಾರರ ಜೀವನ ಸಾಧನೆಗಳ ಕುರಿತು ಸ್ವಲ್ಪಮಟ್ಟಿಗೆ ಪರಿಚಯಿಸಲಾಗಿದೆ.

ಎರಡನೇಯ ಅಧ್ಯಾಯ ಕರ್ನಾಟಕದ ಐತಿಹಾಸಿಕ ಹಿನ್ನಲೆ. ಹಾಗೂ ಆಗಿನ ಕರ್ನಾಟಕ ಚರಿತ್ರೆಯ ಸ್ಥಿತಿಗತಿಗಳನ್ನು ಕೇಂದ್ರವಾಗಿಟ್ಟುಕೊಂಡು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಕರ್ನಾಟಕ ಚರಿತ್ರೆಯ ಮಹತ್ವ ಮತ್ತು ಪ್ರಮುಖ ಅಂಶಗಳ ಬಗ್ಗೆ ಈ ಅಧ್ಯಯನದಲ್ಲಿ ಹೇಳಲಾಗಿದೆ. ಹಾಗೂ ಕರ್ನಾಟಕದಲ್ಲಿ ಶಾತವಾಹನರಿಂದ ಮೈಸೂರು ಒಡೆಯರ ವರೆಗೆ ಆಳ್ವಿಕೆ ಮಾಡಿದ ರಾಜಮನೆತನಗಳು ಹಾಗೂ ಆ ಅರಸರ ಜೀವನ ಸಾಧನೆ ಮತ್ತು ಕರ್ನಾಟಕವು ಎಲ್ಲಾ ಕ್ಷೇತ್ರಗಳಲ್ಲಿ ಎಷ್ಟರಮಟ್ಟಿಗೆ ಗಣನೀಯ ಸೇವೆ ಮಾಡಿದೆ ಎಂಬುದರ ಉಲ್ಲೇಖ ಈ ಅಧ್ಯಯನದಲ್ಲಿ ಅಳವಡಿಸಲಾಗಿದೆ.

ಮೂರನೇಯ ಅಧ್ಯಾಯವು ರಚನೆ ಕಲೆಯ ಹಿನ್ನಲೆ ಕುರಿತು ಸ್ವಲ್ಪಮಟ್ಟಿಗೆ ತಿಳಿಸಲು ಪ್ರಯತ್ನಿಸಲಾಗಿದೆ.

ನಾಲ್ಕನೇಯ ಅಧ್ಯಾಯವು ಸಂಶೋಧನ ಅಧ್ಯಯನದ ಪ್ರಮುಖ ಅಂಶ ಇದರಲ್ಲಿ ಅಳವಡಿಸಲಾಗಿದೆ. ಅಂದರೆ ಕರ್ನಾಟಕ ಚರಿತ್ರೆಯ ಪ್ರಮುಖ ಇತಿಹಾಸ ತಜ್ಞರು ಈ ಅಧ್ಯಯನದ ಕೇಂದ್ರಬಿಂದು ಆಗಿರುತ್ತಾರೆ. ಅವರ ಜೀವನ ಮತ್ತು ಕೃತಿಗಳು, ಸಾಧನೆಗಳು ಅವರು ತಮ್ಮ ಸಂಶೋಧನೆಯಲ್ಲಿ ಯಾವ ರೀತಿ ಅಳವಡಿಸಿಕೊಂಡಿದ್ದಾರೆ. ಹಾಗೂ ಅವರ ಸಂಶೋಧನೆಗಳು ಈ ಅಧ್ಯಯನದಲ್ಲಿ ಒಳಗೊಂಡಿವೆ ಎಂಬುದರ ಬಗ್ಗೆ ವಿವರಿಸಲಾಗಿದೆ.

ಐದನೇಯ ಅಧ್ಯಾಯದಲ್ಲಿ ಇತಿಹಾಸಕಾರರ ಗುರಿ ಮತ್ತು ಮೌಲ್ಯಗಳಿಗೆ ಸಂಬಂಧಿಸಿದ್ದಾಗಿದೆ. ಅಂದರೆ ಕರ್ನಾಟಕ ಇತಿಹಾಸಕಾರರ ಮೌಲ್ಯಗಳು ಹಾಗೂ ಅವರ ಸಂಶೋಧನ ಶೈಲಿಗಳು ಅವರು ಯಾವ ಉದ್ದೇಶಕ್ಕೆ ಒತ್ತು ಕೊಟ್ಟು ಸಂಶೋಧನೆ ಮಾಡಿದ್ದಾರೆ ಎಂಬುದು ಕರ್ನಾಟಕ ಚರಿತ್ರೆಯಲ್ಲಿ ಪ್ರಮುಖ ಅಂಶಗಳ ಕುರಿತು ಅಧ್ಯಯನ ಮಾಡಿದ ಒಂದು ಚಿತ್ರಣ ಈ ಅಧ್ಯಯನದಲ್ಲಿದೆ.

ಆರನೇಯ ಅಧ್ಯಯನವು ಪ್ರಬಂಧದ ಕೊನೆಯ ಅಧ್ಯಾಯ ಸಮಾರೋಪದಿಂದ ಕೊನೆಗೊಳ್ಳುತ್ತದೆ. ಈ ಅಧ್ಯಯನದಿಂದ ಕಂಡುಕೊಂಡ ಫಲಿತಾಂಶಗಳನ್ನು ಕೊಡಲು ಪ್ರಯತ್ನಿಸಲಾಗಿದೆ.

* * *

ಅಧ್ಯಾಯ–೨

# ಕರ್ನಾಟಕ ಐತಿಹಾಸಿಕ ಹಿನ್ನೆಲೆ

ಕರ್ನಾಟಕ ದಕ್ಕನ್ ಪ್ರಸ್ಥಭೂಮಿಯ ಪಶ್ಚಿಮ ಭಾಗದ ಬಹುಭಾಗವನ್ನೊಳಗೊಂಡಿದೆ. ಇದನ್ನು ಪಶ್ಚಿಮದಲ್ಲಿ ಅರಬ್ಬಿ ಸಮುದ್ರವು, ಉತ್ತರದಲ್ಲಿ ಮಹಾರಾಷ್ಟ್ರವು, ಪೂರ್ವದಲ್ಲಿ ಆಂದ್ರ ಪ್ರದೇಶ, ದಕ್ಷಿಣದಲ್ಲಿ ತಮಿಳನಾಡು, ಕೇರಳವು ಸುತ್ತುವರೆದಿವೆ. ಇದರ ಪ್ರಾಚೀನ ಇತಿಹಾಸ ಕಾಲವನ್ನು ಕ್ರಿ.ಶ. ಪೂರ್ವ ೩೦೦ ಕ್ಕೆ ಒಯ್ಯಬಹುದಾಗಿದೆ. ಶಾತವಾಹನರಿಂದ ಹಿಡಿದು ೧೯೪೭ ರಲ್ಲಿ ಕೊನೆಗೊಂಡ ಮೈಸೂರು ಒಡೆಯರವರೆಗೂ ಈ ನಾಡಿನಲ್ಲಿ ವಿವಿಧ ರಾಜಮನೆತನಗಳು ನಿರಂತರವಾಗಿ ಆಳ್ವಿಕೆ ಮಾಡುತ್ತಾ ಬಂದಿವೆ. ಈ ನಿರಂತತೆ ಕರ್ನಾಟಕವನ್ನು ಬಿಟ್ಟರೆ ಇಡೀ ಭಾರತದಲ್ಲೇ ಬೇರೆ ಯಾವ ರಾಜ್ಯವು ಹೊಂದಿಲ್ಲ. ವಿಶೇಷವಾಗಿ ಹೇಳಬೇಕಾದರೆ ಕನ್ನಡ ನಾಡಿನ ನೆಲ, ಜಲವನ್ನಲ್ಲದೆ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆ ಹಾಗೂ ಪ್ರಗತಿಪರ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತದೆ. ಈವರೆಗೂ ಉಪೇಕ್ಷಿಸಲಾಗಿದ್ದ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಗಳ ಅಧ್ಯಯನಕ್ಕೆ ಆದ್ಯತೆ ನೀಡಲಾಗಿದೆ. ಕೇವಲ ರಾಜಕೀಯ ದೃಷ್ಟಿಯಿಂದಲೇ ಒಂದು ದೇಶದ ಮಾಹೋನ್ನತಿಯನ್ನು ಅಂದಾಜು ಮಾಡಲಾಗದು. ಮಾನವನ ನಾಗರೀಕತೆಯ ವಿಕಾಸದ ಹಾದಿಯಲ್ಲಿ ರಾಜಕೀಯದಷ್ಟೆ ಉತ್ತಮ ಸಮಾಜ ನಿರ್ಮಾಣ, ಆರ್ಥಿಕಾಭಿವೃದ್ಧಿ ಹಾಗೂ ಸಾಂಸ್ಕೃತಿಕ ಮೌಲ್ಯಗಳ ಔನುತ್ಯವು ಪರಿಗಣಿತವಾಗಿವೆ. ಈ ಹಿನ್ನೆಲೆಯಲ್ಲಿ ಈ ಕೃತಿ ರೂಪಗೊಂಡಿವೆ. "ಉತ್ಖನಗಳ ಪ್ರಕಾರ 'ಇಯೋಸಿನ್ ಮತ್ತು ನಿಯೋಸಿನ್' ಯುಗಗಳಲ್ಲಿ ಆದಿ ಮಾನವರು ಬಳಸುತ್ತಿದ್ದ ಕಲ್ಲಿನ ಆಯುಧಗಳು ಕರ್ನಾಟಕ ನದಿಗಳ ದಂಡೆಯಲ್ಲಿ ದೊರೆತಿವೆ"[೧]. ಮತ್ತು ಮಸ್ಕಿ, ಬ್ರಹ್ಮಗಿರಿ ಮುಂತಾದ ಸ್ಥಳಗಳಲ್ಲಿ ದೊರೆತ ವಸ್ತುಗಳಿಂದ ನವಶಿಲಾಯುಗ, ತಾಮ್ರಶಿಲಾಯುಗ, ಬೃಹತ್ ಶಿಲಾಯುಗಗಳ ಮಾಹಿತಿ ದೊರಕಿವೆ. "ಎಂ.ಹೆಚ್. ಕೃಷ್ಣಾ ಅವರ 'ಮೈಸೂರಿನ ಪ್ರಾಚೀನ ಇತಿಹಾಸವು' ಪುರಾತನ ಶಿಲಾಯುಗದ ಕಾಲಕ್ಕೆ ಹೋಗುತ್ತದೆ. ಕರ್ನಾಟಕದಲ್ಲಿ ಇತಿಹಾಸ ಪೂರ್ವಕಾಲದಿಂದಲೂ ನಾಗರೀಕತೆ ಬೆಳೆದುಬಂದಂತೆ ಕಾಣುತ್ತದೆ. ಸುಮಾರು ೨೩೦೦ ವರ್ಷಗಳಷ್ಟು ದೀರ್ಘಕಾಲದ ಇತಿಹಾಸ ಹೊಂದಿರುವ ಕರ್ನಾಟಕ, ಭಾರತದ ಇತಿಹಾಸದಲ್ಲೇ ಯಾವ ರಾಜ್ಯಗಳು ಹೊಂದಿಲ್ಲದ ಹಲವು ಪ್ರಥಮಗಳನ್ನು ತನ್ನದಾಗಿಸಿಕೊಂಡಿರುವುದು ಹೆಗ್ಗಳಿಕೆಯ ವಿಚಾರವೇ ಸರಿ"[೨].

ಪ್ರಾಚೀನ ಮತ್ತು ಮಧ್ಯಯುಗಗಳಲ್ಲಿ ಕರ್ನಾಟಕದ ಗಡಿಗಳು ಹಿಗ್ಗಿದಂತೆ ಕುಗ್ಗಿರುವುದೂ ಉಂಟು. ಹಲವು ಸಮಯಗಳಲ್ಲಿ ವಿಶೇಷವಾಗಿ ಚಾಲುಕ್ಯರ ಇಮ್ಮಡಿ ಪುಲಿಕೇಶಿ, ರಾಷ್ಟ್ರಕೂಟರ ನೃಪತುಂಗ, ಧ್ರುವ ಮತ್ತು ಗೋವಿಂದ ಇವರುಗಳ

ದಿಗ್ವಿಜಯಗಳು ದಕ್ಷಿಣದಲ್ಲಿ ಸಿಂಹಾಳ, ಉತ್ತರದಲ್ಲಿ ಕನೋಜ, ಬಂಗಾಲದವರೆಗೂ ವಿಸ್ತರಿಸಿ, ದಾಖಲೆ ನಿರ್ಮಿಸಿದೆ. ಮಧ್ಯಯುಗದ ವಿಜಯನಗರದ ಸಾಮ್ರಾಜ್ಯ ಒಮ್ಮೆ ಇಡೀ ದಕ್ಷಿಣ ಭಾರತವನ್ನು ತನ್ನದಾಗಿಸಿಕೊಂಡಿತು. ಅದರ ವೈಭವ ಕಂಡು ವಿದೇಶಿ ಪ್ರವಾಸಿಗರೇ ಬೆರಗಾಗಿದ್ದಾರೆ. ಇದೇ ಸಂದರ್ಭದಲ್ಲಿ ಬಹುಮನಿ ಸಾಮ್ರಾಜ್ಯದವರು ಆಳ್ವಿಕೆ ಮಾಡಿದ್ದಾರೆ. ಇಡೀ ಭಾರತವನ್ನೇ ವ್ಯಾಪಿಸಿದ ಭಕ್ತಿ ಮಾರ್ಗ ಚಳುವಳಿ ಹುಟ್ಟಿದುದೆ ಕರ್ನಾಟಕದಲ್ಲಿ. ಸಾಮಾಜಿಕವಾಗಿ ವಿಭಿನ್ನ ವರ್ಗಗಳಿದ್ದರೂ ನಾಡಿನ ಸಮಗ್ರತೆಗೆ ಎಂದೂ ಧಕ್ಕೆಯುಂಟಾಗಿರಲಿಲ್ಲ. ಭಾಷೆ ಮತ್ತು ಧಾರ್ಮಿಕ ಸಹಿಷ್ಣುತೆ, ಸಾಮಾಜಿಕ ಸಾಮರಸ್ಯ, "ಬಾಳು ಮತ್ತು ಬಾಳುಗೊಡು" ಎಂಬ ಉದಾತ್ತ ತತ್ವ ಇಲ್ಲಿ ನೆಲೆಗೊಂಡಿದೆ[೩]. ಅನ್ಯರನ್ನು ಸಹನೆಯಿಂದ ಕಾಣುವ ಗುಣ ಈ ಮಣ್ಣು, ತಮ್ಮ ಜಲದಲ್ಲೇ ಮೈಗೂಡಿದೆ. ಈ ಕಾರಣದಿಂದಾಗಿಯೇ ಭಾರತದ ಯಾವ ರಾಜ್ಯದಲ್ಲೂ ಕಂಡು ಬರುವ ವಿವಿಧ ವೃತ್ತಿಯವರು, ಭಾಷಿಕರು, ಧರ್ಮಿಯರು ಇಲ್ಲಿ ನೆಮ್ಮದಿಯ ಬದುಕನ್ನು ಕಂಡುಕೊಳ್ಳಲು ಬಯಸಿರುವದು. ಒಟ್ಟಿನಲ್ಲಿ ಸಾಮಾಜಿಕ ಭದ್ರತೆ ಮತ್ತು ನೆಮ್ಮದಿಗೆ ಕರ್ನಾಟಕ ಹೆಸರುವಾಸಿಯಾಗಿದೆ. ಹಲವು ಕಾರಣಗಳಿಂದ ಕರ್ನಾಟಕ, ಭಾರತದಲ್ಲೇ ಸುರಕ್ಷಿತ ಪ್ರದೇಶವೆಂದು ಪರಿಗಣಿತವಾಗಿದೆ. ಕರ್ನಾಟಕದಲ್ಲಿ ವಿಪುಲವಾಗಿ ದೊರೆಯುತ್ತಿದ್ದ ಬೆಣಚು ಕಲ್ಲು, ಮರಳುಗಲ್ಲು ಮತ್ತು ಬಳಪದ ಕಲ್ಲುಗಳು ಇಂದಿನ ಕಲಾ ಬೆಳವಣಿಗೆಗೆ ಮುಖ್ಯ ಕಾರಣವಾಗಿವೆ. ಉದಾಃ ಬೇಲೂರಿನ ಚೆನ್ನಕೇಶವ ದೇವಾಲಯ, ಶ್ರವಣಬೆಳಗೋಳದ ಗೊಮಟೇಶ್ವರ ಮುಂತಾದವುಗಳು ಸ್ಮರಿಸಬಹುದಾಗಿದೆ. ರಾಷ್ಟ್ರಮಟ್ಟದಲ್ಲಿ ಆಡಳಿತ ಅಧಿಕಾರವನ್ನು ನಿರ್ವಹಿಸಲು ಐ.ಎ.ಎಸ್. ಪರೀಕ್ಷೆಗಳನ್ನು ನಡೆಸಲಾಗುತ್ತದೆ. ಇದರಲ್ಲಿ ಉತ್ತೀರ್ಣರಾದವರು ತವರು ರಾಜ್ಯ ಹೊರತುಪಡಿಸಿದ್ದಲ್ಲಿ ಸೇವೆ ಸಲ್ಲಿಸಲು ಪ್ರಥಮ ಪ್ರಶಸ್ತಿ ನೀಡಿ ಆರಿಸಿಕೊಳ್ಳ ಬಯಸುವ ರಾಜ್ಯ ಕರ್ನಾಟಕವೆಂದರೆ ಅದರ ಪ್ರಾಮುಖ್ಯ ಎಷ್ಟು ಎಂದು ಅಂದಾಜು ಮಾಡಬಹುದು.

"ಬೌದ್ಧಿಕವಾಗಿ ನೋಡಿದರೆ ಕರ್ನಾಟಕ ಇಡೀ ಭಾರತದಲ್ಲೇ ಕ್ರಾಂತಿಯನ್ನು ಮೆರೆದ ನಾಡಾಗಿದೆ. ಬಸವೇಶ್ವರರ ವಚನಗಳು ಮತ್ತು ಪುರಂದರ, ಕನಕದಾಸರ ಕೀರ್ತನೆಗಳಲ್ಲಿ ವಿಶ್ವವೇ ಬೆರಗುಗೊಳಿಸುವಂತಹ ವೈಚಾರಿಕತೆ ಇದೆ. ೧೯ನೇ ಶತಮಾನದ ಕಾರ್ಲ್ ಮಾರ್ಕ್ಸ್‌ನ ಸಮತಾವಾದವನ್ನು ೧೨ನೇ ಶತಮಾನದಲ್ಲಿ ಬಸವೇಶ್ವರರ ಕಾಯಕ ಸಿದ್ಧಾಂತದಲ್ಲಿ ಕಾಣಬಹುದಾಗಿದೆ. ಗಾಂಧೀಜಿಯವರ ನವೋದಯ ಮತ್ತು ಜಾತ್ಯಾತೀತ ಸಮಾಜದ ರೂಪುರೇಷೆ ಕೂಡ ವಚನ ಸಾಹಿತ್ಯದಲ್ಲಿದೆ. ಇಂತಹ ನಾಡು ನಮ್ಮ ಕರ್ನಾಟಕ ನಾಡಿನಲ್ಲಿದೆ"[೪].

ಆರ್ಥಿಕ ಬಲಿಷ್ಠತೆಗೆ ಕೈಗಾರೀಕರಣದ ಮಹತ್ವವನ್ನು ಪ್ರತಿಪಾದಿಸಿ ಕಾರ್ಯತತ್ಪರಾದವರು ಸರ್. ಎಂ. ವಿಶ್ವೇಶ್ವರಯ್ಯನವರು ಕಬ್ಬಿಣ ಮತ್ತು ಉಕ್ಕು

ಹಾಗೂ ಸೋಪಿನ ಕಾರ್ಖಾನೆಗಳನ್ನು ಸ್ಥಾಪಿಸಿದ ಸಂಸ್ಥಾನಗಳ ಪೈಕಿ ಕರ್ನಾಟಕವೇ ಮೊದಲನೆಯದು. ಅಂದರೆ ಈ ತರಹ ಸಂಸ್ಥಾನಗಳಾದ ಹೈದರಾಬಾದ, ಜೈಪೂರ, ಜೋಧಪೂರಗಳಲ್ಲಿ ಆಗ ಅಂತಹ ಪ್ರಯತ್ನ ನಡೆದಿರಲಿಲ್ಲ. ಬ್ರಿಟೀಷ್ ಪ್ರೆಸಿಡೆನ್ಸಿಗಳನ್ನೇ ಅವಲಂಬಿಸಿದವು. ಇಡೀ ಭಾರತದಲ್ಲಿ ಪ್ರಥಮ ಬಾರಿಗೆ ವಿದ್ಯುತ್ ಉತ್ಪಾದನಾ ಕೇಂದ್ರವನ್ನು ಸ್ಥಾಪಿಸಲಾಯಿತು. ಅಣೆಕಟ್ಟುಗಳಲ್ಲಿ ಹೆಚ್ಚು ನೀರು ಸಂಗ್ರಹಿಸಿಡಲು ಅಟೋಮೆಟಿಕ್ ಗೇಟ್‌ಗಳನ್ನು ಸೃಷ್ಟಿ ಮಾಡಿದ ಕೀರ್ತಿ ಕನ್ನಡ ಸುಪುತ್ರ ಭಾರತ ರತ್ನ ಸರ್ ಎಂ. ವಿಶ್ವೇಶ್ವರಯ್ಯನವರದಾಗಿದೆ.

'ಕರ್ನಾಟಕ' ಎಂಬ ಹೆಸರಿನ ಪದ ಪ್ರಪ್ರಥಮವಾಗಿ ಮಹಾಭಾರತದಲ್ಲಿ ಕಂಡುಬಂದಿದೆ. ಅಂದಿನ ಜನಪದಗಳನ್ನು ಕುರಿತು ಹೇಳುವಾಗ 'ಕರ್ಣಾಟಂ', 'ಕರ್ಣಾಟಕಂ' ಎಂಬ ಈ ಕರ್ನಾಟಕ ಪದ ಹಲವಾರು ಪ್ರಾಚೀನ ಕೃತಿಗಳಲ್ಲಿ ರೂಪಾಂತರಗೊಂಡು ಕೊನೆಗೆ 'ಕರ್ನಾಟಕ' ಎಂದು ನಾಮಕರಣವಾಗಿದೆ. ಮೊದಲು ಮಹಾಭಾರತದ ಸಭಾ ಪರ್ವ ಮತ್ತು ಭಿಷ್ಮ ಪರ್ವದಲ್ಲಿ 'ಕರ್ಣಕ', 'ಕರ್ಣಾಟಿಕ್' ಎಂದು ಕಾಣುತ್ತೇವೆ. ತಮಿಳು ಕಾವ್ಯ ಶಿಲ್ಪದಿಕಾರಂನಲ್ಲಿ 'ಕರುನಾಡರ್', ನಂತರ ಚೋಳರ ಶಾಸನಗಳಲ್ಲಿ 'ಕನ್ನರ', ಕವಿರಾಜ ಮಾರ್ಗದಲ್ಲಿ 'ಕನ್ನಡ ನಾಡು' ಹಾಗೂ ರಾಜಶೇಖರನ ಕಾವ್ಯಮೀಮಾಂಶೆಯಲ್ಲಿ 'ಕರ್ನಾಟಕ'ವೆಂದು ಹೀಗೆ ನಮ್ಮ ಕರ್ನಾಟಕ ನಾಡಿನ ಕುರಿತು ಹಲವಾರು ಆಧಾರಗಳಿವೆ. ಜೊತೆಗೆ ನಮ್ಮ ಕರ್ನಾಟಕ ಪದಕ್ಕೆ ಹಲವಾರು ಪದದ ಅರ್ಥ ವಿವರಣೆ ಕೂಡವಿದೆ[೫].

**ಸಂಸ್ಕೃತದಲ್ಲಿ ಕರ್ನಾಟಕಕ್ಕೆ ಕೆಲವು ಅರ್ಥಗಳಿವೆ.**

"ಕರ್+ನಾಟ್+ಆಗಂ=ಕರ್ನಾಟಕಂ ಎಂದರೆ ಕಪ್ಪು ಮಣ್ಣಿನ ನಾಡು ಎನ್ನಲಾಗಿದೆ. ಕಾಳ್ಡವೆಲ್ ಮತ್ತು ಬಿ.ಎಂ. ಶ್ರೀ ಮೊದಲು ಇದನ್ನು ಅನುಮೋದಿಸಿದ್ದಾರೆ. ತಮಿಳಿನಲ್ಲಿ 'ಕರುನಾಡ' ಎಂದರೆ ಬೆಟ್ಟಗಳ ನಾಡು, ಎತ್ತರದ ನಾಡು ಎಂದಾಗುತ್ತದೆ. 'ಕರು' ಎಂದರೆ ಬೆಟ್ಟ, ಈ ರೀತಿಯಾಗಿ ನಮ್ಮ ಕರ್ನಾಟಕ ಪದಕ್ಕೆ ಹಲವಾರು ಆಧಾರಗಳ ಜೊತೆಗೆ ಹಲವಾರು ಅರ್ಥಗಳಿಂದ ಕೂಡಿದೆ ಎಂದು ಹೇಳಬಹುದು"[೬].

ಕರ್ನಾಟಕವು ಬ್ಯಾಂಕ್ ಸ್ಥಾಪನೆ ಮಾಡುವುದರಲ್ಲಿ ಕೂಡ ಸಂಸ್ಥಾನಗಳಲ್ಲಿ ಮೊದಲನೆಯದು. ಸಾಮಾಜಿಕ ನ್ಯಾಯಕ್ಕಾಗಿ ಶ್ರಮಿಸಿದವರಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್ ಭಾರತದಲ್ಲೇ ಮೊದಲಿಗರಾಗಿದ್ದಾರೆ. ೧೯೨೪ ರಲ್ಲಿ ಅವರು ಹಿಂದುಳಿದವರಿಗು ಮತ್ತು ಪಂಚಮರಿಗೂ ಶೈಕ್ಷಣಿಕ ಉದ್ಯೋಗಗಳ ಅವಕಾಶ ಕಲ್ಪಿಸಿದರು. ನಂತರ ಇದನ್ನು ಮತ್ತಷ್ಟು ಅರ್ಥಪೂರ್ಣವಾಗಿ ಕಲ್ಪಿಸಿದವರು ದೇವರಾಜ

ಅರಸರು. ಮೊದಲು ಪಂಚಾಯತ ರಾಜ್ ಜಾರಿಗೊಳಿಸಿ ಗ್ರಾಮ ಮತ್ತು ಪಂಚಾಯಿತಿಗಳನ್ನು ಅಸ್ತಿತ್ವಕ್ಕೆ ತಂದ ಹಿರಿಮೆ ಕರ್ನಾಟಕದಾಗಿದೆ. ಈ ಪಂಚಾಯತ ರಾಜ್ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಮೀಸಲಾತಿ ನಿಗದಿಗೊಳಿಸಿರುವ ಪ್ರಥಮ ರಾಜ್ಯವೇ ಕರ್ನಾಟಕ. ಸರಕಾರಿ ನೌಕರಿಯಲ್ಲಿ ಮಹಿಳೆಯರ ಶೇಕಡಾ ೨೫% ರಷ್ಟು ಮೀಸಲಾತಿ ನೀಡಿದರಲ್ಲಿ ಕೂಡ ಕರ್ನಾಟಕವೇ ಮೊದಲನೆಯದು. ಕರ್ನಾಟಕವು ಸಾಹಿತ್ಯ ಕ್ಷೇತ್ರದಲ್ಲಿ ಅಪಾರ ಗಣನೀಯ ಸಾಧನೆ ಮಾಡಿದೆ. ಇಲ್ಲಿಯವರೆಗೂ ೭ ಮಂದಿ ಕನ್ನಡಿಗರು ಅಂದರೆ ಕುವೆಂಪು, ಬೇಂದ್ರೆ, ಶಿವರಾಮ ಕಾರಂತ, ಮಾಸ್ತಿ ವೆಂಕಟೇಶ ಅಯ್ಯಂಗಾರ, ವಿ.ಕೃ.ಗೋಕಾಕ, ಯು.ಆರ್. ಅನಂತಮೂರ್ತಿ, ಗಿರಿಶ ಕಾರ್ನಾಡ ಇವರೆಲ್ಲರೂ ಜ್ಞಾನಪೀಠ ಪ್ರಶಸ್ತಿ ಪಡೆದಿರುವುದು ಹೆಮ್ಮೆಯ ಸಂಗತಿಯಾಗಿದೆ. ಏಕೆಂದರೆ ನಾವು ಬೇರೆ ಭಾಷೆಗೆ ಹೋಲಿಸಿದರೆ ಕೇವಲ ಶೇಕಡಾ೫ ರಷ್ಟಿರುವ ಕನ್ನಡಿಗರೇ ಮಹತ್ವದವರು.

ಕರ್ನಾಟಕ ಶಿಲ್ಪ ಕಲೆಯ ಒಂದು ಪ್ರಯೋಗಾಲಯ ಅಥವಾ ಕಾರ್ಯಗಾರವಾಗಿ ಪರಿಗಣಿತವಾಗಿದೆ. ಉತ್ತರದ ನಾಗರಶೈಲಿ ಮತ್ತು ದಕ್ಷಿಣದ ದ್ರಾವಿಡ ಶೈಲಿಗಳು ಇಲ್ಲಿ ಸಮ್ಮಿಳಿತಗೊಂಡು ಹೊಯ್ಸಳರ ಕಾಲದಲ್ಲಿ ವೈಸರ ಶೈಲಿ ರೂಪುಗೊಂಡಿತು. ಇಡೀ ವಿಶ್ವದಲ್ಲೇ ಇದೊಂದು ವಿಶಿಷ್ಟ ಬಗೆಯ, ವಿಶಿಷ್ಟ ಶಿಲ್ಪ ಕಲೆಯ ವೈಖರಿ ಎನಿಸಿದೆ. ಬೃಹತ್ ಏಕಶೀಲ ಗೊಮ್ಮಟ ವಿಗ್ರಹ ವಿಶ್ವದಲ್ಲೇ ಅಪರೂಪದ ಸೃಷ್ಟಿಯಾಗಿದೆ. ಬಿಜಾಪೂರ ಗೋಳಗುಮ್ಮಜ ಕೂಡ ಇಲ್ಲಿ ಸ್ಮರಣೀಯ ಹಾಗೂ ಹೆಮ್ಮೆಯ ಸಂಗತಿಯಾಗಿದೆ.

ಜನಪದ, ಜಾನಪದ ಸಾಹಿತ್ಯ, ಲಲಿತಕಲೆ ಮೊದಲಾದ ಸಾಂಸ್ಕೃತಿಕ ಪರಂಪರೆ ಇಲ್ಲಿ ಶ್ರೀಮಂತವಾಗಿದೆ. ಆದರೆ ಬಹುಭಾಗ ಕಣ್ಮರೆಯಾಗಿದೆ. ಅವುಗಳ ಸಂರಕ್ಷಣೆಗಾಗಿ ಇಡೀ ರಾಷ್ಟ್ರದಲ್ಲೇ ಜನಪದ ಲೋಕ ಕೇಂದ್ರ ಸ್ಥಾಪನೆ ಮಾಡಿದ ರಾಜ್ಯ ಕರ್ನಾಟಕವಾಗಿದೆ. ಭಾರತದ ತಂತ್ರಜ್ಞಾನ ಹಾಗೂ ಬಾಹ್ಯಾಕಾಶ ಸಂಶೋಧನೆ ಮತ್ತು ಮಿಲಿಟರಿ ಸಾಧನೋಪಕರಣಗಳ ತಯಾರಿಕೆಯಲ್ಲಿ ಕರ್ನಾಟಕ ಪ್ರಮುಖವಾಗಿದೆ.

**ಕರ್ನಾಟಕ ಇತಿಹಾಸದ ಸ್ವರೂಪ ಮತ್ತು ವ್ಯಾಪ್ತಿ :**

ಇಹಾಸಿಕ ಪರಂಪರೆಯನ್ನುಳ್ಳ ಕರ್ನಾಟಕ ಭಾರತದಲ್ಲಿ ವಿಶಿಷ್ಟ ಸ್ಥಾನಪಡೆದಿದೆ. ಸಾಂಸ್ಕೃತಿಕವಾಗಿ ವಿಶ್ವ ಮಾನ್ಯತೆಯನ್ನು ಗಳಿಸಿದೆ. ಕಲೆ, ಸಾಹಿತ್ಯ ಮತ್ತು ಲಲಿತ ಕಲೆಗಳಲ್ಲಿ ತನ್ನದೇ ಆದ ಸ್ಥಾನಮಾನ ಬೆಳೆಸಿಕೊಂಡಿದೆ.

**ಸ್ವರೂಪ :**

ಕರ್ನಾಟಕವು ಅನೇಕ ಸಾಮ್ರಾಜ್ಯಗಳ ತವರು ಮನೆ. ಇದು ಅನೇಕ ಮತಗಳ, ಗಣಿ, ಶಿಲ್ಪ ಕಲೆಯ ಒಂದು ಕೇಂದ್ರ, ಇದರ ಪರಂಪರೆ ವೈಭಯುತ ವೈವಿಧ್ಯಮಯವಾಗಿದ್ದರೂ ಏಕತೆ, ಸಹನೆ ಮತ್ತು ಪರಸ್ಪರ ಹೊಂದಿಕೊಳ್ಳುವ ಮನೋಭಾವ, ವಿವಿಧ ಮತಗಳ ಸಮನ್ವಯ ಇವು ಇದರ ಸಂಸ್ಕೃತಿಯ ತಿರುಳು. ಮತ್ತು ಕಲಾಕಾರರನ್ನು ಪೋಷಿಸಿದ ನಾಡಾಗಿದೆ. ಉತ್ತರ ಆರ್ಯ ಸಂಸ್ಕೃತಿ ಮತ್ತು ದಕ್ಷಿಣ ಭಾರತದ ದ್ರಾವಿಡ ಸಂಸ್ಕೃತಿಗಳ ಮಿಲನವನ್ನು ಇಲ್ಲಿ ಕಾಣಬಹುದಾಗಿದೆ. ಭಾರತದ ಅನ್ಯಭಾಗಗಳಲ್ಲಿ ಕಾಣಲಾಗದ ರಾಜ್ಯ ಮನೆತನಗಳ ಸುದೀರ್ಘ ಪರಂಪರೆ ಕರ್ನಾಟಕದಾಗಿದೆ. ಶಾತವಾಹನರಿಂದ ಮೈಸೂರಿನ ಒಡೆಯರವರೆಗೆ ಹಲವು ರಾಜಮನೆತನಗಳು ಕರ್ನಾಟಕವನ್ನು ಆಳಿವೆ. ಗೌತಮ ಪುತ್ರ ಶಾತಕರ್ಣಿ, ಮಯೂರ ವರ್ಮ, ಇಮ್ಮಡಿ ಪುಲಿಕೇಶಿ, ಮೂರನೇ ಗೋವಿಂದ, ಕೃಷ್ಣದೇವರಾಯ, ಕೆಳದಿಯ ಚೆನ್ನಮ್ಮ, ಕಿತ್ತೂರು ಚೆನ್ನಮ್ಮ ಮೊದಲಾದ ವೀರಗ್ರಾಣಿಗಳಿಗೆ ಜನ್ಮವಿತ್ತ ನಾಡು ಕರ್ನಾಟಕ. ಧಾರ್ಮಿಕವಾಗಿ ನೋಡಿದರೆ ಎಲ್ಲ ಮತಗಳು ಇಲ್ಲಿ ಆಶ್ರಯ ಪಡೆದಿವೆ. ಬಹುಭಾಷೆ ಜನರು ಇಲ್ಲಿ ಪೋಷಿಸಲ್ಪಟ್ಟಿದ್ದಾರೆ. ಬಾಹುಬಲಿ, ಚಂದ್ರಗುಪ್ತ, ರಾಮಾನುಜರಿಗೆ, ಶಂಕರಾಚಾರ್ಯರಿಗೆ, ಮುಸ್ಲಿಂ ಸಂತ ಬಂದೇನವಾಜ, ಕ್ರೈಸ್ತ ಸಂತ ಜವಿಯರ್ ಮೊದಲಾದವರಿಗೆ ಆಶ್ರಯ ತಾಣವಾಯಿತು. ಜಾತ್ಯಾತೀತ ಆದರ್ಶ, ವಿಶಾಲ ಮನೋಭಾವವಾಗಿತ್ತು. ಹಿಂದೆ ಕರ್ನಾಟಕದಲ್ಲಿ ಅವು ದೈನಂದಿನ ಜೀವನ ಕ್ರಮವಾಗಿದ್ದವೆಂಬುದು ಅದರ ಇತಿಹಾಸವನ್ನು ಅವಲೋಕಿಸಿದಾಗ ಗೋಚರ ವಾಗುತ್ತದೆ. ಉದಾಃ ವೈಷ್ಣವ ರಾಮಾನುಜಾಚಾರ್ಯರ ಶಿಷ್ಯನಾದ ವಿಷ್ಣುವರ್ಧನ ತನ್ನ ಪತ್ನಿ ಶಾಂತಲಾದೇವಿ ಜೈನ ಧರ್ಮವನ್ನು ತ್ಯಜಿಸಬೇಕೆಂದು ಒತ್ತಾಯ ಮಾಡಲಿಲ್ಲ. ಹಾಗೆ ಜೈನ ಧರ್ಮದಲ್ಲಿ ಅವಳಿಗಿದ್ದ ನಂಬಿಕೆ, ಅವಳ ಪತಿ ವಿಷ್ಣುವರ್ಧನನಿಗೆ ಶಿವನ ಮೇಲೆ ನಂಬಿಕೆ ಹೊಂದಿ ಒಂದು ಸುಂದರವಾದ ದೇವಾಲಯವನ್ನು ಕಟ್ಟಿಸುವುದಕ್ಕೆ ಅಡ್ಡಿ ಬರಲಿಲ್ಲ. ಕರ್ನಾಟಕ ಇತಿಹಾಸದಲ್ಲಿ ಇಂತಹ ಅನೇಕ ನಿದರ್ಶನಗಳುಂಟು. ಇದರಿಂದ ಜನರಲ್ಲಿ ಯಾವುದೇ ವ್ಯತ್ಯಾಸವಾಗಲಿ, ಒಡಕಾಗಲಿ ಉಂಟಾಗುತ್ತಿರಲಿಲ್ಲ.

ಪ್ರಜಾ ಕಲ್ಯಾಣದ ಉದಾತ ತತ್ವವನ್ನು ಕನ್ನಡಿಗರು ಬಹು ಹಿಂದಿನಿಂದಲೇ ಅಳವಡಿಸಿಕೊಂಡಿದರು. ಒಂದು ಶಾಸನದ ಪ್ರಕಾರ ಈ ಗುಣಗಳನ್ನು ಮಕ್ಕಳಿಗೆ ತಾಯಿ ಮಡಿಲಿನಿಂದಲೇ ಕಲಿಸಿಕೊಡುತ್ತಿದ್ದಳಂತೆ. ಅಂದರೆ ಕೆರೆ ಕಟ್ಟೆಗಳನ್ನು ಕಟ್ಟಿಸಿ ಬಾವಿ ತೋಡಿಸುವುದು, ದೇವಾಲಯಗಳು ನಿರ್ಮಿಸುವುದು, ಅನಾಥರಿಗೆ, ಸ್ನೇಹಿತರಿಗೆ ಸಹಾಯ ಮಾಡು, ನಿನ್ನನ್ನು ನಂಬಿದವರನ್ನು ತ್ಯಜ್ಜಿಸಬೇಡ. ನಿನ್ನ ಅನುಯಾಯಿಗಳನ್ನು ರಕ್ಷಿಸು. ಮಗುವಿಗೆ ಹಾಲುಣಿಸುತ್ತಾ ತಾಯಿ ಮಗುವಿಗೆ ಕಿವಿಯಲ್ಲಿ ಬೋದಿಸುತ್ತಿದ್ದ ಮಾತುಗಳಿವು.

**ವ್ಯಾಪ್ತಿ :**

"ಕರ್ನಾಟಕ ಇತಿಹಾಸದ ಅಭ್ಯಾಸದ ವ್ಯಾಪ್ತಿಯು ವಿಶಾಲವಾಗಿದೆ. ಅದು ಭೌಗೋಳಿಕವಾಗಿ ದಕ್ಷಿಣ ಭಾರತದಲ್ಲಿ ಎತ್ತರದಲ್ಲಿರುವ ನಾಡಾಗಿದೆ. ಅದು ನರ್ಮದಾ ನದಿಯಿಂದ ಕಾವೇರಿ ನದಿವರೆಗೆ ವ್ಯಾಪಿಸಿದೆ. ಈ ಅಂಶ ಬಾದಾಮಿ ಶಾಸನಗಳಿಂದ ದೊರೆತಿರುವ ಸ್ಥಳಗಳಿಂದ ದೃಢಪಟ್ಟಿದೆ. ನಂತರ ನೃಪತುಂಗನ ಕವಿರಾಜ ಮಾರ್ಗದಲ್ಲಿ ಕಾವೇರಿಯಿಂದ ಗೋದಾವರಿವರೆಗೆ 'ಮಿದ್ ನಾಡಾದ ಕನ್ನಡದೋಳ್' ಎಂದಿದೆ"[೭]. ಅಂದರೆ ಕ್ರಿ.ಶ. ೯ನೇ ಶತಮಾನದ ಕಾಲಕ್ಕೆ ಕರ್ನಾಟಕವು ಗೋದಾವರಿ ವರೆಗೆ ಕುಗ್ಗಿದ ಅಂಶ ಕಂಡುಬರುತ್ತದೆ. ಐತಿಹಾಸಿಕವಾಗಿ ಚಾಲುಕ್ಯರು ಮತ್ತು ರಾಷ್ಟ್ರಕೂಟ ಅರಸರು ಕರ್ನಾಟಕವನ್ನು ಕನೂಜ್‌ನಿಂದ ಕನ್ಯಾಕುಮಾರಿವರೆಗೆ ವಿಸ್ತರಿಸಿದರು. ರಾಷ್ಟ್ರಕೂಟರ ಧ್ರುವ ಮತ್ತು ಗೋವಿಂದನ ದಿಗ್ವಿಜಯಗಳು ಹಿಮಾಲಯದ ತಪ್ಪಲಿನಲ್ಲಿ ಮೊಳಗಿದವು. ಧ್ರುವನ ಮಗ ಇಂದ್ರ, ಮಾಳ್ವ ಮತ್ತು ಗುಜರಾತ ಪ್ರಾಂತಿಯ ಅಧಿಕಾರಿಯಾಗಿದ್ದನು. ಅನಂತರ ಅವನ ವಂಶಸ್ಥರು ಒಂದು ವರ್ಷ ಅಲ್ಲಿ ಆಳ್ವಿಕೆ ಮಾಡಿದರು. ಹನ್ನೊಂದನೆ ಶತಮಾನದಲ್ಲಿ ರಾಷ್ಟ್ರಕೂಟರ ಮತ್ತೊಂದು ಶಾಖೆಯು ಚಂದ್ರ ವಿಗ್ರಹ ಪಾಲ, ಭುವನಪಾಲ, ಗೋಪಾಲ, ಕನೂಜ್ ಅನ್ನು ಆಳಿದರು. ಈ ಮನೆತನದ ಕೊನೆಯ ದೊರೆ ಲಖಣಪಾಲನನ್ನು ಕುತುಬುದ್ದಿನ್ ಐಬಕ್ ಅಂತ್ಯಗೊಳಿಸಿದನು.

ಕ್ರಿ.ಶ. ೧೧ನೇ ಶತಮಾನದ ಕೊನೆಯ ಭಾಗದಲ್ಲಿ ಆಳಿದ ಕರ್ನಾಟಕ ಕುಲಭೂಷಣನೆಂದು ನಾನ್ಯದೇವ ತನ್ನ ಕೃತಿಗಳಲ್ಲಿ ಕರೆದುಕೊಂಡಿದ್ದಾನೆ. ಸಿಮರಾಪೂರ ಇವನ ರಾಜಧಾನಿಯಾಗಿತ್ತು. ಈ ಮನೆತನದ ಮಲ್ಲದೇವ ನೇಪಾಳದಲ್ಲಿ ಆಳಿದ ಈತನ ಅಣ್ಣ ಗಂಗಾದೇವ ಪಾಲರನ್ನು, ಸೇನರನ್ನು ಜಯಿಸಿ ರಾಜ್ಯವನ್ನು ವಿಸ್ತರಿಸಿದನು. ಈ ಮನೆತನದ ಕೊನೆಯ ಅರಸ ಹರಿಸಿಂಹ ಮಹ್ಮದಿಯರ ದಾಳಿಗೆ ತುತ್ತಾದರು. ಚಾಳುಕ್ಯರ ವಿನಯದಿತ್ಯ, ರಾಷ್ಟ್ರಕೂಟರ ಮೂರನೇ ಗೋವಿಂದ ಮತ್ತು ಮೂರನೇ ಕೃಷ್ಣರು ಶ್ರೀಲಂಕಾವನ್ನು ಗೆದ್ದು ಅಲ್ಲಿ ಅಧಿಪತ್ಯ ಸ್ಥಾಪಿಸಿದರು. ಗಂಗರ ಅನೇಕ ನಾಣ್ಯಗಳು ಸಿಂಹಾಳದಲ್ಲಿ ದೊರೆತಿವೆ. ವಿಜಯನಗರ ಕಾಲದಲ್ಲಿ ಎರಡನೇ ದೇವರಾಯ, ಕೃಷ್ಣದೇವರಾಯ, ರಾಮರಾಯ ಶ್ರೀಲಂಕಾದ ಮೇಲೆ ಅಧಿಕಾರ ಹೊಂದಿದ್ದರು. ಆಗ ಇಡೀ ದಕ್ಷಿಣ ಭಾರತ ಒಂದು ಗೂಡಿತು. ಅದರ ಸಾಂಸ್ಕೃತಿಕ ಸಾಧನೆ ಭಾರತೀಯ ಇತಿಹಾಸದಲ್ಲೇ ಸ್ಮರಣೀಯವಾದ ಸಂಗತಿ. ವಿಜಯನಗರ ಪತನದ ನಂತರ ಕರ್ನಾಟಕವು ಛಿದ್ರಗೊಂಡು ಮೈಸೂರು, ಕೆಳದಿ ಮೊದಲಾದ ಸಣ್ಣಮಟ್ಟ ರಾಜ್ಯಗಳು ತಲೆ ಎತ್ತಿದವು. ಅವುಗಳಲ್ಲಿ ಮೈಸೂರು ರಾಜ್ಯ, ವಿಜಯನಗರದ ಪರಂಪರೆಯನ್ನು ಮುಂದುವರೆಸಿತು. ನವಾಬ್, ಹೈದರಾಲಿ ಕಾಲದಲ್ಲಿ ವಿಸ್ತರಿಸಿದ ಮೈಸೂರು ರಾಜ್ಯವು ಟಿಪ್ಪು ಸುಲ್ತಾನ ಕಾಲದಲ್ಲಿ ಕುಗ್ಗಿ ಹೋಯಿತು. ಅವೆಲ್ಲ ಭಾಗಗಳು ಒಟ್ಟು ಗೂಡಿ ವಿಶಾಲ ಮೈಸೂರು ರಾಜ್ಯ ಸ್ಥಾಪನೆಯಾಯಿತು. ಆ ಮೂಲಕ ತನ್ನ ಅಸ್ತಿತ್ವ ಭಾರತ ಇತಿಹಾಸದಲ್ಲಿ ಉಳಿಸಿಕೊಂಡಿದೆ.

ನಂತರ ನಮ್ಮ ಕರ್ನಾಟಕ ಸ್ವಾತಂತ್ರ್ಯ ಆಂದೋಲನ ಏಕೀಕರಣದ ಆಂದೋಲನ ಕೂಡ ಇದೆ. ಮೊದಲಾದವುಗಳನ್ನು ನಾವು ನವಕರ್ನಾಟಕ ಇತಿಹಾಸದಲ್ಲಿ ಈ ರೀತಿ ಕಾಣುತ್ತೇವೆ. ಹರಪ್ಪ ಮಹೆಂಜೋದಾರೊದಲ್ಲಿ ದೊರೆತಿರುವ ಮುದ್ರಣಗಳಲ್ಲಿ ತುಳು ಭಾಷೆ ಸಂಪರ್ಕ ಕಾಣುತ್ತಿವೆ. ಕರ್ನಾಟಕದ ಜನ ಇತರ ದೇಶಗಳೊಡನೆ ವ್ಯಾಪಾರ ಸಂಪರ್ಕ ಬೆಳೆಸಿಕೊಂಡಿದ್ದರು.

ನಂತರ "ರೋಮ್, ಗ್ರೀಕ್ ದೇಶಗಳೊಳಗೂಡಿ ಪ್ರಾಚೀನ ಕರ್ನಾಟಕದಲ್ಲಿ ಸಂಪರ್ಕ ವಿದ್ಯಾ ಬಗ್ಗೆ ಗ್ರಂಥದಲ್ಲಿ ಪರಿಶೀಲಿಸಿದ ಉಲ್ಲೇಖವಿದೆ. ಬಹು ಹಿಂದೆಯೇ ಕರ್ನಾಟಕ ಸಂಪರ್ಕ ವಿದ್ದಿತ್ತು. ಚಂದ್ರಾವಳಿಯಲ್ಲಿ ಹಿತ್ತಾಳೆ ನಾಣ್ಯ ದೊರಕಿವೆ. ಉದಾಹರಣೆಗೆ ಹುಯನ್-ತ್ಸಾಂಗ್, ಚಾಲುಕ್ಯರ ಅರಸ ಎರಡನೇ ಪುಲಿಕೇಶಿ ಆಸ್ಥಾನಕ್ಕೆ ಭೇಟಿ ನೀಡಿದನು. ಪರ್ಷಿಯಾ ಮತ್ತು ಅರಬ್ಬಿಯಾಗಳೊಂದಿಗೆ ಕರ್ನಾಟಕ ಸಂಪರ್ಕ ಹೊಂದಿತು. ಪರ್ಷಿಯಾ ದೊರೆ ಖುಶ್ರು ತನ್ನ ರಾಯಭಾರಿಗಳನ್ನು ಇಮ್ಮಡಿ ಪುಲಿಕೇಶಿಯ ಆಸ್ಥಾನಕ್ಕೆ ಕಳುಹಿಸಿಕೊಟ್ಟನು. ಅರಬ್ ಪ್ರವಾಸಿ ಸುಲೇಮಾನ ನೃಪತುಂಗನ ಆಸ್ಥಾನಕ್ಕೆ ಆಗಮಿಸಿದ ಇವರು, ಸಾಂಬಾರ ಪದಾರ್ಥಗಳು ಕರ್ನಾಟಕದಿಂದ ಒಯ್ಯುತ್ತಿದ್ದರು. ಹಾಗಾಗಿ ಹಲವಾರು ವಿದೇಶಿ ವಿದ್ವಾಂಸರು ವಿಜಯನಗರಕ್ಕೆ ಭೇಟಿ ನೀಡಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ".

ಇವೆಲ್ಲ ಅಂಶಗಳನ್ನೊಳಗೊಂಡ ಹಿನ್ನಲೆಯಲ್ಲಿ ಕರ್ನಾಟಕದ ವ್ಯಾಪ್ತಿಯು ಬಹಳ ವಿಶಾಲವಾಗಿದ್ದು, ಬೃಹತ್ ಕರ್ನಾಟಕವೆಂದು ಪರಿಗಣಿಸಬಹುದಾಗಿದೆ.

**ಕರ್ನಾಟಕ ಇತಿಹಾಸ ಅಧ್ಯಯನದ ಪ್ರಾಮುಖ್ಯತೆ :**

ಸುಮಾರು ೨೦೦೦ ವರ್ಷಗಳ ಇತಿಹಾಸವುಳ್ಳ ಕರ್ನಾಟಕ ರಾಜಕೀಯ ಏಕತೆಯನ್ನು ನಿರಂತರವಾಗಿ ಮುಂದುವರೆಸಿಕೊಂಡು ಬಂದಿದೆ. ಆ ಕಾರ್ಯವನ್ನು ಚಾಲುಕ್ಯರು, ರಾಷ್ಟ್ರಕೂಟರು, ವಿಜಯನಗರದ ಚಕ್ರವರ್ತಿಗಳು, ಬಿಜಾಪೂರದ ಅದಿಲ್‌ಶಾಹಿಗಳು, ಮೈಸೂರು ಒಡೆಯರು ದಕ್ಷತೆಯಿಂದ ನಿರ್ವಹಿಸಿದ್ದಾರೆ. ವಿಜಯನಗರ ಪತನದ ನಂತರ ಕೆಲ ಕಾಲ ಪಾಳೆಯಗಾರರಲ್ಲಿ ಹಂಚಿ ಹೋಗಿದೆ. ಕರ್ನಾಟಕದ ಭೂ ಭಾಗವನ್ನು ಒಂದು ಗೂಡಿಸಿದ್ದ ಹೆಗ್ಗಳಿಕೆ ಒಡೆಯರುಗಳಿಗು ಮತ್ತು ಹೈದರಾಲಿಗೂ ಸಲ್ಲುತ್ತದೆ. ಟಿಪ್ಪು ಗೆದ್ದಿದಕ್ಕಿಂತ ಕಳೆದುಕೊಂಡಿದ್ದೇ ಹೆಚ್ಚು ಬ್ರಿಟೀಷರೊಡನೆ ಜಾಣ್ಮೆಯಿಂದ ವ್ಯವಹರಿಸಿ ಕೈಬಿಟ್ಟು ಹೋಗಿದ ಸಂಸ್ಥಾನವನ್ನು ಉಳಿಸಿಕೊಂಡದ್ದು ಮಹಾರಾಣಿ ಲಕ್ಷ್ಮಮ್ಮ ಮಣಿಯವರ ಜಾಣ್ಮೆಯ ಮಹತ್ತರ ಸಾಧನೆಯಾಗಿದೆ.

ಇಡೀ ದೇಶದಲ್ಲೇ ಕರ್ನಾಟಕ ಎಲ್ಲಾ ಕ್ಷೇತ್ರಗಳಲ್ಲಿ ಮುಂಚೂಣಿಯಲ್ಲಿದೆ. ಹಲವು ಪ್ರಥಮಗಳನ್ನು ಸಾಧಿಸಿ ಮೆಚ್ಚುಗೆಗೆ ಪಾತ್ರವಾಗಿದೆ. ಕರ್ನಾಟಕದ ವೀರ ವನಿತೆ

ಕಿತ್ತೂರ ರಾಣಿ ಚೆನ್ನಮ್ಮ ಬ್ರಿಟೀಷರ ವಿರುದ್ಧ ತೋರಿದ ಕೆಚ್ಚೆದೆಯ ಧೈರ್ಯ ಪ್ರದರ್ಶಿಸಿದ ರಾಷ್ಟ್ರಭಕ್ತಿ ಸ್ಮರಣೀಯವಾಗಿದೆ. ಹಾಗೂ ಇಡೀ ದೇಶದಲ್ಲೇ ಮೊದಲ ಬಾರಿಗೆ ಪ್ರಜಾಪ್ರತಿನಿಧಿ ಸಭೆ ಸ್ಥಾಪಿಸಿದ ಹೆಗ್ಗಳಿಕೆ ಮೈಸೂರು ಸಂಸ್ಥಾನಕ್ಕೆ ಸಲ್ಲುತ್ತದೆ. ಅದಕ್ಕೆ ಕಾರಣಕರ್ತರಾದ ರೆಸಿಡೆಂಟ್ ಗೋರ್ಡನ್, ದಿವಾನ್ ಸಿ. ರಂಗಾಚಾರಲು ಮತ್ತು ಅರಸ ಹತ್ತನೆಯ ಚಾಮರಾಜ ಒಡೆಯರ ಅಭಿನಂದನಾರ್ಹರಾಗಿದ್ದಾರೆ. ಈ ಮೂಲಕ ಪ್ರಜಾಗಳ ಆಡಳಿತದಲ್ಲಿ ಸಕ್ರೀಯವಾಗಿ ಭಾಗವಹಿಸುವಂತಾಯಿತು. ಇಡೀ ಭಾರತದಲ್ಲಿ ಯಾವ ಸಂಸ್ಥಾನಕ್ಕೂ ಸಂವಿಧಾನವಿರಲಿಲ್ಲ. ಅಂತಹ ಸಂದರ್ಭದಲ್ಲಿ ೧೯೨೩ ರಲ್ಲಿ ರಾಜ್ಯ ಸಂವಿಧಾನ ರೂಪಿಸಿಕೊಂಡದ್ದು ಮೈಸೂರು. ಮಹಿಳೆಯರಿಗೆ ಮಹತ್ವದ ಹಕ್ಕು ನೀಡಿದ ಪ್ರಥಮ ರಾಜ್ಯವೆಂದು ಪ್ರಶಂಸೆಗೆ ಅದು ಪಾತ್ರವಾಗಿದೆ. ೧೯೨೪ ರಲ್ಲಿ ಬೆಳಗಾಂವನಲ್ಲಿ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಜರುಗಿದ ಕಾಂಗ್ರೇಸ್ ಅಧಿವೇಶನ ಭಾರತದ ಇತಿಹಾಸದಲ್ಲಿ ಪ್ರಸಿದ್ಧವಾಗಿದೆ. ಗಾಂಧೀಜಿಯವರು ಒಮ್ಮೆ ಮಾತ್ರ ಕಾಂಗ್ರೇಸ್‌ನ ಅಧ್ಯಕ್ಷತೆ ವಹಿಸಿಕೊಂಡರು, ಅದು ಕರ್ನಾಟಕದಲ್ಲಿ ಆಗಿತ್ತು.

ವಿಜಯನಗರ ಕಾಲದಿಂದಲೂ ಸಣ್ಣ-ಪುಟ್ಟ ಮತೀಯ ವಿವಾದಗಳು ತಲೆ ಎತ್ತಿದ್ದವು. ಅವುಗಳನ್ನು ಸೌಹಾರ್ದವಾಗಿ ಬಗೆಹರಿಸಿಕೊಳ್ಳಲಾಗಿದೆ. ಒಟ್ಟಿನಲ್ಲಿ ಸಾಮಾಜಿಕ ಭದ್ರತೆ ಮತ್ತು ನೆಮ್ಮದಿಗೆ ಹೆಸರುವಾಸಿಯಾಗಿದೆ. ನಮ್ಮ ಕರ್ನಾಟಕದ ಇನ್ನೊಂದು ವಿಶೇಷತೆ ಎಂದರೆ ಇಡೀ ದೇಶದಲ್ಲೇ ಮೊಟ್ಟಮೊದಲು ಸ್ವಾತಂತ್ರ್ಯ ಮಾಡಿಕೊಂಡ ಹಳ್ಳಿ 'ಈಸೂರು' ಆಗಿದೆ. ಅದು ಕೂಡ ಕರ್ನಾಟಕದಲ್ಲಿದೆ. ಹೀಗೆ ಹಲವಾರು ಬುದ್ಧಿ ಜೀವಿಗಳಿಂದ ಕೂಡಿದ ನಮ್ಮ ನಾಡಿನಲ್ಲಿ ಹಲವಾರು ಕ್ಷೇತ್ರದಲ್ಲಿ ಗಣನೀಯವಾದ ಸಾಧನೆ ಮಾಡಿದೆ. ಉದಾಃ ಸರ್ ಎಂ. ವಿಶ್ವೇಶ್ವರಯ್ಯ, ಕುವೆಂಪು, ಬೇಂದ್ರೆ, ಶಿವರಾಮ ಕಾರಂತ, ವಿ.ಕೃ. ಗೋಕಾಕ ಮುಂತಾದವರು ಈ ನಾಡಿನವರು. ಸ್ವಾತಂತ್ರ್ಯಕ್ಕಾಗಿ ಕರ್ನಾಟಕವು ಇಡೀ ದೇಶದಲ್ಲೇ ವೈಶಿಷ್ಟತೆಯಿಂದ ಕೂಡಿದೆ. ಯಾವ ಭೇದಭಾವವಿಲ್ಲದೆ ಅನೇಕ ಭಾಷೆಗಳಾದ ಕನ್ನಡ, ತೆಲುಗು, ತಮಿಳು, ಪರ್ಷಿಯಾ, ಉರ್ದು, ಇಂಗ್ಲೀಷ್ ಇತ್ಯಾದಿ ಭಾಷೆಗಳು ಇಲ್ಲಿ ರಾಜಾಶ್ರಯ ಪಡೆದುಕೊಂಡವು.

ನಮ್ಮ ಕರ್ನಾಟಕವು ಶಿಲ್ಪ ಕಲೆಯಲ್ಲಿ ಕೂಡ ಗಣನೀಯ ಸಾಧನೆ ಮಾಡಿದೆ. ಅಂದರೆ ಹಲವಾರು ಶೈಲಿಯನ್ನು ಅಳವಡಿಸಿಕೊಂಡದರ ಮೂಲಕ, ಬಿಜಾಪೂರ ಗೋಳ ಗುಂಬಜ ಕೂಡ ಸ್ಮರಣೀಯವಾಗಿದೆ. ಹಾಗೂ ಕೇಂದ್ರ ಸ್ಥಾಪನೆ ಮಾಡಿದ್ದು ಮೊದಲ ರಾಜ್ಯ ಕರ್ನಾಟಕವಾಗಿದೆ. ಹೀಗೆ ಹಲವಾರು ಕ್ಷೇತ್ರಗಳಲ್ಲಿ ಸಾಧನೆ ಮಾಡಿದ್ದರಿಂದ ಕರ್ನಾಟಕದ ಅಭ್ಯಾಸ ಪ್ರಮುಖ ಅಂಶವಾಗಿದೆ.

* * *

## -: ಅಡಿ ಟಿಪ್ಪಣಿಗಳು :-

೧) ಫಾಲಾಕ್ಷ ಃ ಸಮಗ್ರ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಪುಟ ಸಂಖ್ಯೆ ೩

೨) ಭಟ್ಟ ಎಲ್.ಃ ಕರ್ನಾಟಕದ ಇತಿಹಾಸ, ಪುಟ ಸಂಖ್ಯೆ ೩

೩) ಫಾಲಾಕ್ಷ ಃ ಸಮಗ್ರ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಪುಟ ಸಂಖ್ಯೆ III

೪) ಫಾಲಾಕ್ಷ ಃ ಸಮಗ್ರ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಪುಟ ಸಂಖ್ಯೆ III

೫) ಫಾಲಾಕ್ಷ ಃ ಸಮಗ್ರ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಪುಟ ಸಂಖ್ಯೆ ೨

೬) ಫಾಲಾಕ್ಷ ಃ ಸಮಗ್ರ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಪುಟ ಸಂಖ್ಯೆ ೩

೭) ಫಾಲಾಕ್ಷ ಃ ಸಮಗ್ರ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಪುಟ ಸಂಖ್ಯೆ ೫

೮) ಫಾಲಾಕ್ಷ ಃ ಸಮಗ್ರ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಪುಟ ಸಂಖ್ಯೆ ೬

* * *

ಅಧ್ಯಾಯ-೩

# ಇತಿಹಾಸ ರಚನಾ ಕಲೆಯ ಹಿನ್ನಲೆ

"ಯಾವ ದೇಶಕ್ಕೆ ಇತಿಹಾಸ ಇಲ್ಲವೋ ಆ ದೇಶಕ್ಕೆ ಉಜ್ವಲವಾದ ಭವಿಷ್ಯವಿಲ್ಲ"[೧]. ಇತಿಹಾಸ ಜನರ ಜೀವಳವಾಗಿದೆ. ಇತಿಹಾಸವು ದೇಶ ಹಾಗೂ ಜನರ ಸಾಧನೆ ಮತ್ತು ವೈಭವಗಳ ಪ್ರತೀಕವಾಗಿದೆ. ಇತಿಹಾಸ ಮನುಷ್ಯನ ಏಳು-ಬೀಳುಗಳ ಕಥೆ, ಇತಿಹಾಸ ಮುಂದಿನ ಜೀವನಕ್ಕೆ ಮಾರ್ಗದರ್ಶಿ. ಇದು ಸ್ಫೂರ್ತಿದಾಯಕವು ಕೂಡ ಆಗಿದೆ. ಮನುಷ್ಯನು ಗತಕಾಲದಲ್ಲಿ ಮಾಡಿದ ತಪ್ಪುಗಳನ್ನು ಪುನರವರ್ತಿಸದ ಹಾಗೆ ಎಚ್ಚರಿಕೆಯ ಗಂಟೆಯಾಗದೆ ಇತಿಹಾಸ ಅಧ್ಯಯನದಿಂದ ಪ್ರಪಂಚದ ಜ್ಞಾನ, ಸಹಿಷ್ಣುತೆ, ಔದರ್ಯ ಬೆಳೆಯುತ್ತದೆ. ಆದುದ್ದರಿಂದ ಇತಿಹಾಸ ರಚನೆ ಅತ್ಯಾವಶ್ಯಕವಾಗಿದೆ.

"ಇತಿಹಾಸ ರಚನಾ ಕಲೆ ಅತ್ಯಂತ ಪ್ರಾಚೀನವಾದದ್ದು. ಬೆಬಿಲೋನಿಯ ಮತ್ತು ಈಜಿಪ್ಟ ದೇಶಗಳಲ್ಲಿ ಪ್ರಥಮ ಬಾರಿಗೆ ಇತಿಹಾಸ ರಚನೆ ಕಂಡುಬರುತ್ತದೆ. ಗ್ರೀಕರಿಂದಲೆ ಇತಿಹಾಸ ರಚನೆ ಪ್ರಾರಂಭವಾಗಿದೆ ಎಂದು ಕೆಲವರ ನಂಬಿಕೆ. ಕ್ರಿ.ಪೂ. ೩೦೦೦ ವರ್ಷಗಳ ಹಿಂದೆಯೇ ಗ್ರೀಕ್ ಮತ್ತು ಚೀನಾದಲ್ಲಿ ಇತಿಹಾಸ ರಚನಾಕಲೆ ಪ್ರಾರಂಭವಾಯಿತು ಎಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಗ್ರೀಕ್ ದೇಶವು ಇತಿಹಾಸ ರಚನಾ ಕಲೆಯ ತೊಟ್ಟಿಲು ಎಂದು ಪರಿಗಣಿಸಲಾಗಿದೆ. ಈ ಕಾಲದಲ್ಲಿ ಇತಿಹಾಸವನ್ನು ಪದ್ಯ ರೂಪದಲ್ಲಿ ಬರೆಯುತ್ತಿದ್ದರು"[೨]. ಇತಿಹಾಸದ ಪಿತಾಮಹಾ ಎಂದೆನಿಸಿಕೊಂಡ ಹೆರೋಡೋಟಸ್ (ಕ್ರಿ.ಪೂ. ೪೮೪ ರಿಂದ ೪೨೪) ೬೦೦ ಸಂಪುಟಗಳುಳ್ಳ 'ಹಿಸ್ಟೋರಿಜ್'[೩] ಎಂಬ ಗ್ರಂಥವನ್ನು ಬರೆದನು. ಲಿವಿ ಎನ್ನುವ ರೋಮನ್ ಇತಿಹಾಸಕಾರ ೧೪೨ ಕೈಪಿಡಿಗಳಲ್ಲಿ ೭೦೦ ವರ್ಷಗಳ ಸಮಗ್ರ ಇತಿಹಾಸವನ್ನು ಬರೆದಿದ್ದಾನೆ. ಗ್ರೀಕರು ವೈಜ್ಞಾನಿಕ ಮಾನವಾತ್ಮಕ ವೈಚಾರಿಕ ನಿರೂಪಣಾತ್ಮಕ ಲಕ್ಷಣಗಳುಳ್ಳ ಇತಿಹಾಸವನ್ನು ರಚಿಸಿದ್ದರು. ರೋಮನ್ ಇತಿಹಾಸ ವೈಭವಿಕರಣಕ್ಕೆ, ರಾಷ್ಟ್ರ ಪ್ರೇಮಕ್ಕೆ, ವಿರೋಧಿ ಭಾವನಕ್ಕೆ ಹೆಚ್ಚು ಒತ್ತು ನೀಡಿದೆ. ಮಧ್ಯ ಕಾಲದಲ್ಲಿ ಕ್ರೈಸ್ತರ ಚರ್ಚುಗಳ ಹಾಗೂ ಪೋಪರ ಕಾಲದಲ್ಲಿ ಧಾರ್ಮಿಕ ಇತಿಹಾಸ ರಚನೆಯಾಯಿತು. ದೇವರ ನಿರ್ಣಯವನ್ನು ತಿಳಿಸುವುದೆ ಇತಿಹಾಸದ ಮುಖ್ಯ ಗುರಿ ಜಿಸಸ್. ಈ ಇತಿಹಾಸದ ಕೇಂದ್ರ ಬಿಂದು ಪೋಪರ ವರ್ಣನೆ ಒಳಗೊಂಡಿದೆ. ನಂತರ ಕಾಲದಲ್ಲಿ ಪೋಪರ ಭೃಷ್ಟಾಚಾರ, ಅನಾಚಾರವನ್ನು ಖಂಡಿಸಿ ಇತಿಹಾಸವು ಸ್ವಾತಂತ್ರ್ಯ ಸಮಾನತೆ, ನ್ಯಾಯ ಮುಂತಾದವುಗಳನ್ನು ಪ್ರತಿಪಾದಿಸಿ ವೈಚಾರಿಕ ಇತಿಹಾಸಕ್ಕೆ ಒತ್ತು ನೀಡಿತ್ತು.

"ಅರಬ್ಬರ ಇತಿಹಾಸ ಕಾಲವನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಇಸ್ಲಾಂ ಧರ್ಮದ ಮುಂಚಿನ ಇತಿಹಾಸ ಹಾಗೂ ಇಸ್ಲಾಂ ಧರ್ಮದ ಸ್ಥಾಪನೆ ನಂತರದ ಇತಿಹಾಸ. ಅರಬ್ ಇತಿಹಾಸದಲ್ಲಿ ವೀರರ ಬಲಿದಾನ, ಸಾಹಸ ದಿಗ್ವಿಜಯಗಳು, ಇಸ್ಲಾಂ ಧರ್ಮದ ಪ್ರಚಾರ ಮುಂತಾದವುಗಳನ್ನು ಒಳಗೊಂಡಿದೆ. ಇಷಕ್ ಎಂಬುವನು ಮುಸ್ಲಿಂ ಇತಿಹಾಸದ ಪಿತಾಮಹಾನೆಂದು ಪರಿಗಣಿಸಲಾಗಿದೆ. ಪಿರ್‌ದೌಸಿ, ತಬರಿ, ಅಲ್ಬೆರೋನಿ, ಮಸೂದಿಯನು, ಅರಬ್ಬರ ಹೆರಡಾಟ್ಟಸ್ ಎಂದು ಕರೆಯಲಾಗಿದೆ. ಈ ಮುಸ್ಲಿಂ ಇತಿಹಾಸ ತಜ್ಞರು ರಾಜಕೀಯ ಹಾಗೂ ಆಡಳಿತ ವ್ಯವಸ್ಥೆ ಎಷ್ಟು ಅವಶ್ಯಕತೆಯೋ ಉತ್ತಮ ಸಮಾಜ ರೂಪಿಸುವುದು ಕೂಡ ಅಷ್ಟೇ ಅವಶ್ಯಕತೆ ಇದೆ. ನೀತಿ ನಿಯಮಗಳು, ಉತ್ತಮ ಕಾನೂನುಗಳು, ಅಬ್ದುಲ್ ಇಬ್ಬನ್ ಖಲ್ದೂನ್ ಜೈವಿಕ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾನೆ"[೪]

"ಆಧುನಿಕ ಕಾಲದ ಇತಿಹಾಸ ರಚನೆಯ ಮೇಲೆ ಪುನರ್‌ಜೀವನದ ಪ್ರಭಾವ ಕಂಡು ಬರುತ್ತದೆ. ವೈಚಾರಿಕತೆ ಈ ಕಾಲದ ಮುಖ್ಯ ಲಕ್ಷಣ. ಹಾಗೂ ಮಾನವೀಯತೆಯ ಇನ್ನೊಂದು ಅಂಶ ಈ ಭೂಮಿಯ ಮೇಲೆ ಸುಃಖ ಸಂತೋಷದಿಂದ ಬಾಳುವುದು ಮಾನವತವಾದದ ಸಿದ್ಧಾಂತ. ಇದನ್ನು ಈ ಕಾಲದ ಇತಿಹಾಸಕಾರರು ಮಂಡಿಸಿದ್ದಾರೆ"[೫].

ಭಾರತದಲ್ಲಿ ದೆಹಲಿ ಸುಲ್ತಾನರ ಆಳ್ವಿಕೆಯ ಕಾಲದಲ್ಲಿ ಕೂಡ ಅನೇಕ ಮುಸ್ಲಿಂ ಇತಿಹಾಸ ತಜ್ಞರು ಇತಿಹಾಸವನ್ನು ರಚಿಸಿದ್ದಾರೆ. ಅವರು ದೆಹಲಿ ಸುಲ್ತಾನರ ಹಾಗೂ ಮೊಘಲರ ಇತಿಹಾಸವನ್ನು ರಚಿಸಿದ್ದಾರೆ. ಈ ಕಾಲದ ಅನೇಕ ಇತಿಹಾಸಕಾರರಾದ ಅಮೀರ ಖುಸ್ರೋ, ಬರಾನಿ ಮುಂತಾದವರು ತಮ್ಮ ಸುಲ್ತಾನರ ಸಾಮ್ರಾಜ್ಯ ವಿಸ್ತರಣೆ, ಆಡಳಿತ ವ್ಯವಸ್ಥೆ ಕುರಿತು ರಚಿಸಿದ್ದಾರೆ.

೧೬ನೇ ಶತಮಾನದಿಂದ ೧೯ನೇ ಶತಮಾನದ ವರೆಗೆ ಬ್ರಿಟೀಷರ ಕಾಲದಲ್ಲಿ ಅನೇಕರು ಭಾರತದಲ್ಲಿ ಈಷ್ಟ್ ಇಂಡಿಯಾ ಕಂಪನಿಯ ಆಡಳಿತವನ್ನು ಕುರಿತು ಬರೆದಿದ್ದಾರೆ. ಇಂಗ್ಲೀಷ್ ಇತಿಹಾಸಕಾರರು ಕೂಡ ಭಾರತದ ಇತಿಹಾಸಕ್ಕೆ ಅಪಾರ ಸೇವೆಯನ್ನು ಸಲ್ಲಿಸಿದ್ದಾರೆ. ಲಾರ್ಡ್ ಕನ್ನಿಂಗ್‌ಹ್ಯಾಂ ಇವರು ಪ್ರಾಚ್ಯಾಶಾಸ್ತ್ರ ಇಲಾಖೆಯಲ್ಲಿ ನಿರ್ದೇಶಕರಾಗಿದ್ದು, ಸಿಂಧೂ ನಾಗರೀಕತೆಯ ಸಂಶೋಧನೆಗೆ ಕಾರಣರಾಗಿದ್ದಾರೆ.

**ಭಾರತೀಯ ಇತಿಹಾಸ ರಚನಾ ಕಲೆ :**

ಭಾರತದ ಆರಂಭದ ಇತಿಹಾಸ ರಚನೆಗೆ ಅಲ್ಪ ಮಾತ್ರ ಆಧಾರಗಳೆಂದರೆ ಆರ್ಯ ಕಾಲದ ವೈದಿಕ ಸಾಹಿತ್ಯ, ವೇದಗಳು, ಪುರಾಣಗಳು, ಧರ್ಮಶಾಸ್ತ್ರಗಳು,

ಉಪನಿಷತ್ತುಗಳು ಇವುಗಳು ಐತಿಹಾಸಿಕ ಕೃತಿಗಳಾಗಿರಲಿಲ್ಲ. ಏಕೆಂದರೆ ಅವುಗಳಲ್ಲಿ ಕಾಲಪ್ರಜ್ಞೆಯಾಗಲಿ ಹಾಗೂ ನಿರೂಪಣೆಯಾಗಲಿ ಇರಲಿಲ್ಲ. ನಂತರ ಕಲಿಯುಗದ ೧೫೩ ಅರಸು ಮನೆತನಗಳ ಬಗ್ಗೆ ಬರೆಯಲಾಯಿತು. ಅರ್ಥಶಾಸ್ತ್ರ ಮೌರ್ಯರ ಕಾಲದಲ್ಲಿ ರಚನೆಯಾಯಿತು. ಆದರೆ ಅದು ರಾಜನೀತಿ ಮತ್ತು ಯುದ್ಧ ನೀತಿಯ ಪುಸ್ತಕವಾಗಿದೆ. ಗುಪ್ತರ ಕಾಲದಲ್ಲಿ 'ಕೌಂತಲೇಶ್ವರ ದೌತ್ಯಂ', 'ವಿಶಾಖದತ್ತನ ಮುದ್ರ ರಾಕ್ಷಸ', 'ದಂಡಿಯ ದಶಕುಮಾರ ಚರಿತೆ' ಮುಂತಾದ ಪುಸ್ತಕಗಳಲ್ಲಿ ಐತಿಹಾಸಿಕ ಮಾಹಿತಿ ದೊರೆಯುತ್ತದೆ. ಬಾಣಭಟ್ಟನಿಂದ ರಚಿಸಲ್ಪಟ್ಟ ಹರ್ಷ ಚರಿತ ವಂಶಾವಳಿಯನ್ನು ಕಾಲಾನುಕ್ರಮವಾಗಿ ಐತಿಹಾಸಿಕ ಘಟನೆಗಳ ದಾಖಲೆಯನ್ನು ಹೊಂದಿದೆ.

ರಜಪೂತರ ಇತಿಹಾಸವನ್ನು ತಿಳಿಸುವ ಅನೇಕ ಕಾವ್ಯಗಳು ರಚನೆಯಾದವು. ನಯನ ಚಂದ್ರನಿಂದ 'ಹಮ್ಮೀರ ಕಾವ್ಯ', ಕಲ್ಯಾಣನಿಂದ ರಚನೆಯಾದ 'ರಾಜತರಂಗಿಣಿ' ಇವು ಸಂಪೂರ್ಣ ಐತಿಹಾಸಿಕ ಗ್ರಂಥಗಳಾಗಿ, ಈ ಕಾವ್ಯಗಳು ಅನೇಕ ಮೂಲಾಧಾರಗಳನ್ನಿಟ್ಟುಕೊಂಡು ರಚಿಸಲ್ಪಟ್ಟ ಕಾವ್ಯಗಳಾಗಿವೆ. 'ಶಿಲಪ್ಪಾದಿಕಾರಂ' ಇದು ತಮಿಳು ಮಹಾಕಾವ್ಯ. ತಮಿಳುನಾಡಿನ ಆರಂಭದ ಇತಿಹಾಸವನ್ನು ವಿವರಿಸುತ್ತದೆ. ಜೈನ ಮತ್ತು ಬೌದ್ಧ ಗ್ರಂಥಗಳು ಕೂಡ ದೂರದೇಶ ಮತ್ತು ನಾಡುಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತವೆ. ಈ ಕಾಲದ ಇತಿಹಾಸಕಾರರು ನೈತಿಕ ಮೌಲ್ಯಗಳ ಬಗ್ಗೆ ಹೆಚ್ಚು ಆಸಕ್ತಿಯನ್ನು ತೋರಿದ್ದಾರೆ. ಭಾರತದಲ್ಲಿ ೧೨ನೇ ಶತಮಾನದ ಇತಿಹಾಸ ಕೆಲವು ಮುಸ್ಲಿಂ ಇತಿಹಾಸಕಾರರಿಂದ ರಚನೆಯಾಗಿದೆ. ಮುಸ್ಲಿಂ ಇತಿಹಾಸಕಾರರಾದ ಅಲ್ಬೆರೊನಿ, ಅಮೀರ ಖುಸ್ರು, ಜಿಯಾಉದ್ದಿನ್ ಬರಾನಿ, ಮಲ್ಲಿಕ್ ಇಸಾಮಿ ಫೆರಿಸ್ತಾ, ಗುಲ್ಬದನ್ ಬೇಗಂ, ಫೆರಿಸ್ತ ಅಬ್ದುಲ್, ಬಾದಾಯುನಿ ಮುಸ್ಲಿಂ ಇತಿಹಾಸಕಾರರಾದ ಇವರು ಆ ಕಾಲದ ಸುಲ್ತಾನರ ದಿಗ್ವಿಜಯಗಳು, ವೈಭವ ಹಾಗೂ ಧರ್ಮಪ್ರಚಾರ ವಿವರಿಸುತ್ತಾರೆ. ವಿದೇಶ ಪ್ರವಾಸಿಗರ ಕಥಾನಕಗಳು ಭಾರತ ಇತಿಹಾಸ ರಚನೆಯಲ್ಲಿ ಸತ್ಯವಾದ ಮಾಹಿತಿ ಲಭಿಸುತ್ತದೆ.

**ಕರ್ನಾಟಕ ಇತಿಹಾಸ ರಚನಾ ಶೈಲಿ :**

ಕರ್ನಾಟಕ ಇತಿಹಾಸವು ಅಪೂರ್ವವೂ ಮತ್ತು ಅನನ್ಯವೂ ಆಗಿದೆ. ಕರ್ನಾಟಕ ಇತಿಹಾಸಕ್ಕೆ ಸಂಬಂಧಿಸಿದಂತೆ ನೂರಾರು ಗ್ರಂಥಗಳು ರಚನೆಯಾಗಿವೆ. ಕರ್ನಾಟಕ ಇತಿಹಾಸ ರಚಿಸಲು ಅನೇಕ ಆಧಾರಗಳು ಲಭಿಸುತ್ತವೆ. ಸಾವಿರಾರು ಶಾಸನಗಳು, ನಾಣ್ಯಗಳು, ಕೈಫಿಯತ್‌ಗಳು, ಸ್ಮಾರಕಗಳು ಇವುಗಳನ್ನು ಆಧಾರವಾಗಿಟ್ಟುಕೊಂಡು ಅನೇಕ ಇತಿಹಾಸ ತಜ್ಞರು ಸಮಗ್ರ ಕರ್ನಾಟಕದ ಇತಿಹಾಸವನ್ನು ರಚಿಸಿದ್ದಾರೆ. ಕರ್ನಾಟಕದ ಪ್ರಾಗತಿಕ ಕಾಲದಿಂದ ಇಂದಿನವರೆಗೆ ಅನೇಕ ಕ್ಷೇತ್ರಗಳ ಇತಿಹಾಸ

ರಚನೆಯಾಗಿದೆ. ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ, ಧಾರ್ಮಿಕ ಹಾಗೂ ಕಲಾತ್ಮಕ ಇತಿಹಾಸವನ್ನು ನಮ್ಮ ಇತಿಹಾಸಕಾರರು ರಚಿಸಿದ್ದಾರೆ.

ಕರ್ನಾಟಕದ ಇತಿಹಾಸ ರಚನೆಯಲ್ಲಿ ಸ್ವಾತಂತ್ರ್ಯ ಹೋರಾಟ, ಕರ್ನಾಟಕದ ಏಕೀಕರಣ ಸಮಗ್ರ ದಾಖಲೆಗಳನ್ನು ಸಂಗ್ರಹಿಸಿ ಅನೇಕ ಘಟನೆಗಳನ್ನು ರೋಮಾಂಚನಕಾರಿಯಾಗಿ ಬಿಂಬಿಸಿದ್ದಾರೆ. ಬಿ.ಎಲ್. ರೈಸ್, ಫ್ಲೀಟ್ ಮತ್ತು ಅನೇಕರು ಕರ್ನಾಟಕದ ಸಾವಿರಾರು ಶಾಸನಗಳನ್ನು ಸಂಗ್ರಹಿಸಿ, ಅವುಗಳನ್ನು ಅಧ್ಯಯನ ಮಾಡಿ ಹೊಸಗನ್ನಡ ಆಂಗ್ಲ ಭಾಷೆಗೆ ಭಾಷಾಂತರಿಸಿ, ಅವುಗಳನ್ನು ಅನೇಕ ಸಂಪುಟಗಳಾಗಿ ವಿಂಗಡಿಸಿ, ಕರ್ನಾಟಕದ ಅನೇಕ ಗ್ರಂಥಾಲಯಗಳಲ್ಲಿ ಸಂಗ್ರಹಿಸಿಟ್ಟಿದ್ದಾರೆ. ಇವು ಸಂಶೋಧನಾ ವಿದ್ಯಾರ್ಥಿಗಳಿಗೆ, ಇತಿಹಾಸ ರಚನಾಕಾರರಿಗೆ ಬಹು ಉಪಯುಕ್ತವಾಗುತ್ತಿವೆ. ಕರ್ನಾಟಕದ ಪ್ರಸಿದ್ಧ ಕೆಲವು ಇತಿಹಾಸಕಾರರಾದಂತಹ ಎಸ್.ಎಸ್. ಶೆಟ್ಟರ್, ಡಾ॥ ರಾಜಶೇಖರ್ ಮತ್ತು ಡಾ॥ ಸುಂದರ್ ಕ್ಷೇತ್ರ ಸಂದರ್ಶನಗಳ ಮೂಲಕ ಕರ್ನಾಟಕ ಶಿಲ್ಪ ಕಲಾ ಚಾತುರ್ಯ ಹಾಗೂ ಕಲಾ ವೈಭವವನ್ನು ವಿಪುಲವಾಗಿ ವಿವರಿಸಿದ್ದಾರೆ. ಕರ್ನಾಟಕದ ಕೆಲವು ಇತಿಹಾಸ ತಜ್ಞರು ಸಾಂಸ್ಕೃತಿಕ ಇತಿಹಾಸಕ್ಕೆ ಮಹಾನ್ ಸೇವೆ ಸಲ್ಲಿಸಿದ್ದಾರೆ.

ಬ್ರಿಟೀಷರ್ ಆಳ್ವಿಕೆಯ ಬಗ್ಗೆ ಸ್ವಾತಂತ್ರ್ಯ ಸಂಗ್ರಾಮ ಏಕೀಕರಣದ ಬಗ್ಗೆ ವಿಪುಲವಾಗಿ ಸತ್ಯವಾದ ಮಾಹಿತಿಯನ್ನು ನೀಡಿದ್ದಾರೆ. ಪ್ರೊ॥ ಮಹಾಬಲೇಶ್ವರಪ್ಪ ಇವರು ಹೈದರಾಬಾದ ವಿಮೋಚನಾ ಚಳುವಳಿಯನ್ನು ಕುರಿತು ಬರೆದ ಇತಿಹಾಸ ಓದುವವರ ಮನದಾಳವನ್ನು ಮುಟ್ಟುತ್ತದೆ. ಫಾಲಾಕ್ಷ ಮತ್ತು ಬಿ.ಪಿ. ಹೂಗಾರ ರವರು ಇತಿಹಾಸಕ್ಕೆ ಮಾಡಿದ ಸೇವೆ ಅಮೋಘ. ಪಿ.ಯು.ಸಿ.ಯಿಂದ ಎಂ.ಎ. ವಿದ್ಯಾರ್ಥಿಗಳಿಗಾಗಿ ಅನೇಕ ಇತಿಹಾಸದ ಪಠ್ಯಕ್ರಮಕ್ಕೆ ಅನುಗುಣವಾಗಿ ಸಂಕ್ಷಿಪ್ತವಾಗಿ ಸರಳ ಭಾಷೆಯಲ್ಲಿ ಅನೇಕ ಪುಸ್ತಕಗಳನ್ನು ರಚಿಸಿದ್ದಾರೆ. ಇವರ ಸೇವೆ ಇತಿಹಾಸದ ವಿದ್ಯಾರ್ಥಿಗಳು ಮರೆಯಲಾಗುವುದಿಲ್ಲ.

* * *

## -: ಅಡಿ ಟಿಪ್ಪಣಿಗಳು :-

೧) ಫಾಲಾಕ್ಷ : ಇತಿಹಾಸ ರಚನೆ ಮತ್ತು ಸಂಶೋಧನೆ, ಪುಟ ಸಂಖ್ಯೆ ೨೪

೨) ಫಾಲಾಕ್ಷ : ಇತಿಹಾಸ ರಚನೆ ಮತ್ತು ಸಂಶೋಧನೆ, ಪುಟ ಸಂಖ್ಯೆ ೧೫೭

೩) ಫಾಲಾಕ್ಷ : ಇತಿಹಾಸ ರಚನೆ ಮತ್ತು ಸಂಶೋಧನೆ, ಪುಟ ಸಂಖ್ಯೆ ೮

೪) ಫಾಲಾಕ್ಷ : ಇತಿಹಾಸ ರಚನೆ ಮತ್ತು ಸಂಶೋಧನೆ, ಪುಟ ಸಂಖ್ಯೆ ೧೭೭

೫) ಫಾಲಾಕ್ಷ : ಇತಿಹಾಸ ರಚನೆ ಮತ್ತು ಸಂಶೋಧನೆ, ಪುಟ ಸಂಖ್ಯೆ ೧೮೯

* * *

ಅಧ್ಯಾಯ-೪

## ಕರ್ನಾಟಕ ಚರಿತ್ರೆಯ ಪ್ರಮುಖ ಇತಿಹಾಸ ತಜ್ಞರು

೧. ಬಿ.ಎಲ್.ರೈಸ್ (೧೮೩೭-೧೯೭೪)

೨. ಡಾ॥ ಜೆ. ಎಫ್.ಫ್ಲಿಟ್ (೧೮೪೭-೧೯೧೭)

೩. ಆರ್.ನರಸಿಂಹಚಾರ್ (೧೮೬೦-೧೯೩೬)

೪. ಹಯವದನರಾವ (೧೮೬೪-೧೯೪೬)

೫. ಎಸ್. ಕೃಷ್ಣ ಸ್ವಾಮಿ ಅಯ್ಯಂಗರ್ (೧೮೭೧-೧೯೫೩)

೬. ಡಾ॥ ಎಂ.ಹೆಚ್. ಕೃಷ್ಣ (೧೮೯೨-೧೯೪೭)

೭. ಕೆ.ಎ. ನೀಲಕಂಠ ಶಾಸ್ತ್ರಿ (೧೮೯೨-೧೯೭೫)

೮. ಆರ್.ಆರ್. ದಿವಾಕರ (೧೮೯೪-೧೯೯೦)

೯. ಎನ್. ಲಕ್ಷ್ಮೀ ನಾರಾಯಣ (೧೮೯೮-೧೯೭೯)

೧೦. ಆರ್. ಎಸ್. ಪಂಚಮುಖಿ (೧೮೯೮-೧೯೮೨)

೧೧. ಬಿ.ಎ. ಸಾಲೇತೊರ (೧೯೦೦-೧೯೬೩)

೧೨. ಡಾ॥ ಶ್ರೀಕಂಠ ಶಾಸ್ತ್ರಿ (೧೯೦೪-೧೯೬೦)

೧೩. ಪಿ.ಬಿ. ದೇಸಾಯಿ (೧೯೧೦-೧೯೭೪)

೧೪. ಜಿ.ಎಸ್. ಗಾಯ್ (೧೯೨೨-೧೯೭೬)

೧೫. ಎಮ್.ಎಮ್. ಕಲ್ಬರ್ಗಿ

೧೬. ಪ್ರೊ॥ .ಬಿ.ಪಿ. ಹೂಗಾರ

೧೭. ಡಾ॥ ಸರ್ವೋದಯ ಶಿವಪುತ್ರ ಎಸ್.

# ೧. ಬಿ.ಎಲ್. ರೈಸ್ ಕ್ರಿ.ಶ. ೧೮೩೭-೧೯೨೭

## ಪರಿಚಯ:


ಬಿ.ಎಲ್. ರೈಸ್

ಇವರ ಪೂರ್ಣ ಹೆಸರು ಬೆಂಜಮಿನ್ ಲೂಯಿ ರೈಸ್ ಇವರು ಶಿಕ್ಷಣ ಇಲಾಖೆಯಲ್ಲಿದ್ದರೂ. ಕೂಡ ಅಲಲ್ಲಿ ಸಂಚರಿಸುತ್ತಿದ್ದಾಗ ಸ್ಥಳ ಪುರಾಣಗಳ ವಿಷಯಗಳ ಪುರಾತನ ಗ್ರಂಥಗಳನ್ನು ಆಗಾಗ ದೊರೆಯುತ್ತಿದ್ದ, ಶಾಸನಗಳನ್ನು ಅಧ್ಯಯನ ಮಾಡಿದ ಒಬ್ಬ ಮಹಾನ್ ಇತಿಹಾಸಕಾರರಾಗಿದ್ದರು, ಇವರು ಕರ್ನಾಟಕದಲ್ಲಿ ಸಲ್ಲಿಸಿದ ಸೇವೆ ಕನ್ನಡಿಗರ ಮನದಾಳದಲ್ಲಿ ಅಡಗಿದೆ. ಇವರು ಮಾಡಿದ ಇತಿಹಾಸ ಅಧ್ಯಯನ ಹಾಗೂ ಪ್ರಾಚೀನ ಗ್ರಂಥಗಳ ಸಂಶೋಧನೆಯನ್ನು ಸ್ಮರಿಸುವಂತಹದಾಗಿದೆ.

**ಜನನ:**

ಬೆಂಜಮಿನ್ ಲೂಯಿ ರೈಸ್‌ರು ೧೮೩೭ನೇಯ ಜುಲೈ ೧೭ ರಂದು ಬೆಂಗಳೂರಿನಲ್ಲಿ ಜನಿಸಿದರು. ಅವರ ತಂದೆ ಬೆಂಜಮಿನ್ ಹೋಲ್ವಾರೈಸ್ ಇವರು ಬೆಂಗಳೂರಿನಲ್ಲಿ ಧರ್ಮೋಪದೇಶಕರಾಗಿದ್ದರು. ಬಿ.ಎಲ್. ರೈಸ್‌ರ ಬಾಲ್ಯ ಜೀವನ ಕನ್ನಡ ನಾಡಿನಲ್ಲಿ ಕಳೆದು ಅವರು ಕನ್ನಡದಲ್ಲಿ ಪಾಂಡಿತ್ಯವನ್ನು ಪಡೆದರು.

**ಶಿಕ್ಷಣ ಮತ್ತು ಸೇವೆ:**

"ಬಿ.ಎಲ್. ರೈಸ್‌ರವರು ತಮ್ಮ ವಿದ್ಯಾಭ್ಯಾಸಕ್ಕಾಗಿ ಇಂಗ್ಲೆಂಡಿಗೆ ಹೋದರು ಅಲ್ಲಿ ಬಿ.ಎ. ಪಾಸಾಗಿ ಕೆಲವು ಕಾಲ ಅಲ್ಲೆ ಕೆಲಸ ಮಾಡಿದರು ೧೮೬೦ರಲ್ಲಿ ಭಾರತಕ್ಕೆ ಮರಳಿ ಬಂದ ಮೇಲೆ ಅವರು ಬೆಂಗಳೂರಿನ ಸೆಂಟ್ರೆಲ್ ಹೈಸ್ಕೂಲಿನಲ್ಲಿ ಹೆಡ್ ಮಾಸ್ತರರಾದರು. ೧೮೬೫-೬೬ ನಡುವೆ ಅವರು ಮೈಸೂರು ಮತ್ತು ಕೊಡಗುಗಳಲ್ಲಿ ೧೮೮೨ರ ವರೆಗೆ ಅವರು ಮೈಸೂರು ಸಂಸ್ಥಾನದಲ್ಲಿ ಪೊರಪ್ಪರ ಆಫ್ ಪಬ್ಲಿಕ್ ಇನ್ಸ್‌ಪೆಕ್ಟರ್ ಆಗಿದ್ದರು. ಅವರು ೧೮೮೨ರಲ್ಲಿ ಹಂಟರ್ ಕಮೀಷನದ ಕಾರ್ಯದರ್ಶಿಯಾಗಿ ಕಲಕತ್ತಾದಲ್ಲಿದ್ದರು. ೧೮೮೪ರಲ್ಲಿ ಮೈಸೂರು ಸಂಸ್ಥಾನದಲ್ಲಿ ಪ್ರಾಚ್ಯವಸ್ತು ಇಲಾಖೆಯು ಪ್ರಾರಂಭವಾದ ಕೂಡಲೆ ಅವರು ಪ್ರಾಚ್ಯವಸ್ತು ಇಲಾಖೆಯ ನಿರ್ದೇಶಕರು ಮತ್ತು ವಿದ್ಯ ಖಾತೆಯ ಸೆಕ್ರೆಟರಿಯಾಗಿ ಎರಡು ಹುದ್ದೆಗಳನ್ನು ನೋಡಿಕೊಳ್ಳುತ್ತಿದ್ದರು. ಆಗ ಅವರು ಪೊಲೀಸ್ ಕಾರ್ಯದಿಂದ ಮುಕ್ತರಾದರು ೧೯೬೦ರಲ್ಲಿ ಪ್ರಾಚ್ಯವಸ್ತುಗಳ ಸಂಶೋಧನೆಯಲ್ಲಿ ಮಹತ್ವವನ್ನು ಮನಗಂಡು

ಮೈಸೂರು ಸರ್ಕಾರವು ಪೂರ್ಣಾವಧಿಯ ನಿರ್ದೇಶಕರೆಂದು ನೇಮಿಸಿತ್ತು. ಈ ಸ್ಥಾನವನ್ನು ಅವರು ೧೯೦೬ರಲ್ಲಿ ನಿವೃತ್ತರಾಗುವರೆಗು ಅಲಂಕರಿಸಿದ್ದರು. ಅವರಿಗೆ ಪ್ರಾಚ್ಯವಸ್ತು ಸಂಶೋಧನೆಯಲ್ಲಿ ಹಾಗೂ ಕನ್ನಡ ಭಾಷೆ ಮತ್ತು ಸಾಹಿತ್ಯಗಳಲ್ಲಿ ಹೆಚ್ಚಿನ ಆಸಕ್ತಿಯಿತ್ತು. ಅವರು ಸಂಚಾರಕ್ಕೆ ಹೋದಾಗ ಅವರ ಮನಸ್ಸು ಶಾಸನಗಳ ಅಭ್ಯಾಸಕಡೆಗೆ ಹೊರಟ್ಟಿತ್ತು. ೧೯೮೪ರಲ್ಲಿ ಅವರು ಪ್ರಾಚ್ಯವಸ್ತು ಇಲಾಖೆಯ ಮುಖ್ಯಸ್ಥರಾದ ಕೂಡಲೆ ಅವರು ಅಲಲ್ಲಿ ದೊರೆಯುತ್ತಿದ್ದ ಶಾಸನಗಳನ್ನು ಓದುವ ಹವ್ಯಾಸ ಬೆಳೆಸಿಕೊಂಡು ಶಾಸನ ವಿಷಯಗಳನ್ನು ಆಗಾಗ ಪ್ರಕಟಿಸುತ್ತಿದ್ದರು. ಅವರು ಮೈಸೂರು ಸಂಸ್ಥಾನದ ಎಲ್ಲಾ ಶಾಸನಗಳನ್ನು ಜಿಲ್ಲೆ ಜಿಲ್ಲೆಗಳ ಪ್ರಕಾರ ಶಾಸ್ತ್ರೀಯವಾಗಿ ಸಂಗ್ರಹಿಸಿ ಅಭ್ಯಸಿಸಿ ಪ್ರಕಟಿಸಬೇಕೆಂಬ ಘನ ಯೋಜನೆಯನ್ನು ಹಾಕಿಕೊಂಡರು ಅವರು ಶಾಸನಗಳನ್ನು ಸಂಗ್ರಹಿಸುವದರ ಜೊತೆಗೆ ನೂರಾರು ಹಸ್ತ ಲಿಖಿತ ಗ್ರಂಥಗಳನ್ನು ಸ್ಥಾನಿಕ ಪರಂಪರೆಗಳನ್ನು ಮತ್ತು ಐತಿಹಾಸಿಕ ದಾಖಲೆಗಳನ್ನು ಸಂಗ್ರಹಿಸಿದ್ದರು. ಇದರ ಫಲವಾಗಿ ೧೯೭೭-೭೮ ರಲ್ಲಿ ಮೈಸೂರು ಗ್ಯಾಸೆಟಿಯರುಗಳ ಎರಡು ಸಂಪುಟಗಳನ್ನು ಸಿದ್ದ ಮಾಡಿ ಪ್ರಕಟಿಸಿದ್ದರು. ಎರಡು ಸಂಪುಟಗಳ ವಿಪುಲವಾದ ಐತಿಹಾಸಿಕ ಮಾಹಿತಿಗಳನ್ನು ಮತ್ತು ಎಲ್ಲಾ ಬಗೆಯ ವಿಷಯಗಳನ್ನು ಒಳಗೊಂಡಿದೆ"[೧].

"ಬಿ.ಎಲ್. ರೈಸ್ ರವರು ಸೇವಾ ನಿವೃತ್ತರಾಗಿ ಇಂಗ್ಲೆಂಡಿನಲ್ಲಿ ವಿಶ್ರಾಂತಿ ಪಡೆಯುತಿದ್ದಾಗ ಮೈಸೂರು ಆಂಡ್ ಕೂರ್ಗ ಫ್ರಮ್ ಇನ್‌ಸ್ಕ್ರಿಪ್ಷನ್ಸ್ ಎಂಬ ಗ್ರಂಥ ನಡೆಸಿದ್ದರು. ಸಂಶೋಧನೆಗಳ ಫಲವಾಗಿ ಇದು ಅಡಕವಾಗಿದೆ ಇವರ ಸೇವೆಯು ಕನ್ನಡಿಗರ ಮನಸ್ಸಿನಲ್ಲಿ ಗಾಡವಾಗಿ ನೆಲೆಸಿದೆ ಇವರು ಕನ್ನಡ, ತೆಲುಗು, ತಮಿಳು ಮತ್ತು ಸಂಸ್ಕೃತದಲ್ಲಿ ಪರಿಣಿತರಾಗಿದ್ದರು. ಕರ್ನಾಟಕದಲ್ಲಿ ಅವರು ಸಲ್ಲಿಸಿದ ಸೇವೆಯನ್ನು ಪ್ರಮುಖವಾಗಿ ಶಿಕ್ಷಣ ಇತಿಹಾಸಾಧ್ಯಯನ ಶಾಸನಗಳು ಮತ್ತು ಪ್ರಾಚೀನ ಗ್ರಂಥಗಳ ಸಂಶೋಧನೆಯಲ್ಲಿ ಸ್ಮರಿಸುವಂತಹುದಾಗಿದೆ. ಇವರು ವಿದ್ಯಾ ಶಾಖೆಯ ಕಾರ್ಯದರ್ಶಿಯಾಗಿದ್ದಾಗಲೆ ಕೊಡಗಿನ ಶಾಸನಗಳನ್ನು ಸಂಗ್ರಹಿಸಿ ಒಂದು ಸಂಪುಟವನ್ನಾಗಿ ಪ್ರಕಟಿಸಿದ್ದರು. ಇದು ಎಪಿಗ್ರಾಫಿಯ ಕರ್ನಾಟಕ ಮಾಲೆಗೆ ನಾಂದಿಯಾಯಿತ್ತು"[೨].

**ಎಫಿ ಗ್ರಾಫಿಯಾ ಕರ್ನಾಟಕ ಸಂಪುಟಗಳು:**

ಬಿ.ಎಲ್. ರೈಸರು ೧೮೮೬ರಲ್ಲಿ ಕೂರ್ಗ ಶಾಸನಗಳ ಸಂಪುಟವನ್ನು ಮತ್ತು ೧೮೮೬ರಲ್ಲಿ ಶ್ರವಣ ಬೆಳಗೊಳ ಶಾಸನಗಳ ಸಂಪುಟವನ್ನು ಪ್ರಕಟಸಿದ್ದರು. ಈ ಸಂಪುಟಗಳಲ್ಲಿ ಅವರು ಶಾಸನಗಳನ್ನು ಸಂಪಾಧಿಸಿದ್ದಾರೆ. ಅಫಿಸ್ಸು ಮತ್ತು ವಿಚಾರ ಮಾಡಿದ್ದಾಗ ವಿಶೇಷ ಕೆಲಸ ಬಿಳುತಿದುದ್ದರಿಂದ ಉಳಿದ ಹತ್ತು ಸಂಪುಟಗಳನ್ನು

ಮಹತ್ವ ಪೂರ್ಣವಾಗಿ ಮುನ್ನುಡಿಯೊಂದಿಗೆ ಪ್ರಕಟಿಸಲು ೧೮೯೦-೧೯೦೬ರ ವರೆಗೆ ಅಂದರೆ ೧೬-೧೭ ವರ್ಷ ಹಿಡಿದವು ಈ ಹನ್ನೆರಡು ಸಂಪುಟಗಳಲ್ಲಿ ೧೮೬೯ರ ಶಾಸನಗಳು ಪ್ರಕಟವಾಗಿವೆ. ಆ ಸಂಪುಟಗಳಲ್ಲಿ ಹಲವಾರು ಶಾಸನಗಳು, ಚಿತ್ರಗಳು ಇವೆ. ಮತ್ತು ಅವುಗಳ ಇಂಗ್ಲೀಷ ಭಾಷಾಂತರ ಸಹ ಇದೆ.

**ಬಿಬ್ಲಿಯೋಥಿಕಾ ಕರ್ನಾಟಕ ಮಾಲೆ:**

"ಬಿ.ಎಲ್. ರೈಸರು ಮೈಸೂರು ಸಂಸ್ಥಾನದಲ್ಲಿದ್ದ ಸಾವಿರಾರ ಹಸ್ತ ಲಿಖಿತ ಗ್ರಂಥಗಳನ್ನು ಸಂಗ್ರಹಿಸಿ ಅವುಗಳ ಸಲುವಾಗಿ ಪ್ರಾರಂಭಿಸಿದ ಮೈಸೂರು ಗೌರ್ನಮೇಂಟ್ ಓರಿಯಂಟಲ್ ಲಾಯಟ್ರಿರಿಯಲ್ಲಿದ್ದರು. ಕರ್ನಾಟಕದಲ್ಲಿ ಕರ್ನಾಟಕ ಭಾಷ ಭೂಷಣ ೧೮೮೪ ಕರ್ನಾಟಕ ಶಬ್ದಾನು ಶಾಸನ ೧೮೯೦ ಪಂಪ ಭಾರತ ಅಥವಾ ವಿಕ್ರಮಾರ್ಜುನವಿಜಯ ೧೮೯೮ ಪಂಪ ಕಾವ್ಯಯಣ ೧೮೯೭ ಕವಿರಾಜ ಮಾರ್ಗ  ಮತ್ತು ಕಾವ್ಯಾವ ಲೋಕ ಅತಿ ಮಹತ್ವದ ಕನ್ನಡ ಗ್ರಂಥಗಳನ್ನು ಸಂಪಾದಿಸಿ ಬಿಟಿಯೋಥಿಕ್ ಕರ್ನಾಟಕ ಮಾಲೆಯನ್ನು ಪ್ರಕಟಿಸಿದ್ದರು. ಕರ್ನಾಟಕ ಭಾಷೆ ಭೋಷಣವು ಒಂದು ಲಕ್ಷಣ ಗ್ರಂಥ. ಇದರ ಕೃರ್ತ ನಾಗ ವರ್ಮಾ. ವೆಂಗಿದೇಶದಲ್ಲಿ ಈತನು ಮೂಲತ ಬ್ರಾಹ್ಮಣನಾಗಿದ್ದು, ಅನಂತರ ಜೈನನಾದನೆಂದು ರೈಸರು ಅಭಿಪ್ರಾಯ ಪಡುತ್ತಾರೆ"[೩].

**ಬಿ.ಎಲ್. ರೈಸ್‌ರ ವಾರ್ಷಿಕ ವರದಿಗಳು:**

"ರೈಸ್‌ರು ಪ್ರಕಟಿಸಿದ ಮೊದಲನೆ ನಾಲ್ಕು ವಾರ್ಷಿಕ ವರದಿಗಳು ಕೇವಲ ಕೆಲವೆ ಪುಟಗಳನ್ನೊಳಗೊಂಡಿವೆ. ಅವುಗಳಲ್ಲಿ ಸರ್ಕಾರದ ಒಪ್ಪಿಗೆಗಳು ಮಾತ್ರ ಪ್ರಕಟವಾಗದೆ. ರೈಸ್‌ರವರು ಪ್ರಸಿದ್ದ ಸಂಶೋಧನೆಗಳನ್ನು ನಿಯತಕಾಲಿಕೆಗಳಲ್ಲಿ ಸುಮಾರು ಐವತ್ತು ಬಿಡಿ ಲೇಖನಗಳನ್ನು ಪ್ರಕಟಿಸಿದ್ದರು. ೧೮೭೬ರಲ್ಲಿ ಜೆಮ್ಮಬರ್ಜೆಸ್ಸರು ಹೊಸದಾಗಿ ಪ್ರಾರಂಭಿಸಿದ ಇಂಡಿಯನ್ ಆಂಡ್ ಕ್ರಲಿಯ ವಿಚಲನೆಂದು ಸಂಪುಟದಲ್ಲಿ ರೈಸ್‌ರು ಮರ್ಕಿರಾ ತಾಮ್ರ ಶಾಸನಗಳನ್ನು ಪ್ರಕಟಿಸಿದ್ದರು. ಅವರು 'ಮಹಿಷ ಮಂಡಲ' ಎಂಬ ಲೇಖನವು ಮಿಥಿಕ್ ಸೋಸೈಟಿ ಮೂರನೆ ಸಂಪುಟದ ೬೫ ಮತ್ತು ೭೧ ಪುಟಗಳಲ್ಲಿ ಪ್ರಸಿದ್ಧವಾಗಿವೆ. ಅವರು ಜೆ.ಎಮ್. ಫ್ಲೀಟರ್ ಬಗೆಗೆ ಎಫಿಗ್ರಾಫಿಯ ಇಂಡಿಕಾದ ೧೩ನೇಯ ಸಂಪುಟದ ೯-೧೩ ಪುಟಗಳಲ್ಲಿ ಬರೆದಿರುವರು. ರೈಸ್‌ರು ಬಹಳ ವೇಳೆಯಲ್ಲಿ ಎಫಿಗ್ರಾಫಿಯ ಕರ್ನಾಟಕ ಸಂಪುಟಗಳಲ್ಲಿ ಸಂಪಾದಿಸಿ ಪ್ರಕಟಪಡಿಸುವಲ್ಲಿ ಮತ್ತು ಕಛೇರಿಯಲ್ಲಿ ಕೆಲಸಗಳಲ್ಲಿ ತೊಡುಗುತ್ತಿರುವುದರಿಂದ ಅವರಿಗೆ ಹೊರಗಿನ ಪತ್ರಿಕೆಗಳಿಗೆ ಬಹಳ ಲೇಖನ ಬರೆದುಕೊಡಲು ಸಾಧ್ಯವಾಗಲಿಲ್ಲ"[೪]

"ಬಿ.ಎಲ್.ರೈಸ್‌ರ ಕೃತಿಗಳು"".

- ಮೈಸೂರು ಇನ್ಸ್ಕ್ರಿಪ್ಷನ್ಸ್ ಶಾಸನ ಸಂಪುಟಗಳ ಪ್ರಕಟಣೆ ೧೮೭೭.
- ಮೈಸೂರು ಗ್ಯಾಸೆಟಿಯರ್ .
- ಎಫಿಗ್ರಾಫಿಯ ಕರ್ನಾಟಕ ಸಂಪುಟಗಳು ೧೮೬೬.
- ಶ್ರವಣ ಬೆಳಗೋಳ ಶಾಸನ ಸಂಪುಟ ೧೮೮೯.
- ಮೈಸೂರ ಆಂಡ್ ಕೂರ್ಗ ಫ್ರಮ್ ಇನ್ಸ್ಕ್ರಿಪ್ಷನ್ಸ್.
- ಅಶೋಕನ ಬ್ರಹ್ಮಗಿರಿಯ ಶಾಸನ ಸಂಶೋಧನೆ.
- ಬಿಬ್ಲಿ ಯೋಥಿಕಾ ಕರ್ನಾಟಕ ಮಾಲೆ.

**ಬಿ.ಎಲ್.ರೈಸ್‌ರ ಸೇವಾ ನಿವೃತ್ತಿ:**

ಇವರು ಮೈಸೂರು ಸಂಸ್ಥಾನದ "ಡಾಯಕ್ರಿಕ್ ಆಫ್ ಆರ್ಕಿಯಲಾಜಿಕಲ್ ರಿಸರ್ಚ್" ಎಂಬ ಹುದ್ದೆಯಿಂದ ೧೯೦೬ರಲ್ಲಿ ನಿವೃತ್ತಿ ಹೊಂದಿ, ಇವರು ಇಂಗ್ಲೆಂಡಿನ್ 'ಹ್ಯಾರೋ' ಎಂಬ ಸ್ಥಳದಲ್ಲಿ ವಿಶ್ರಾಂತಿ ಪಡೆಯುತ್ತಿದರು. ಅಲ್ಲಿಂದಲೇ ಅವರು ಕರ್ನಾಟಕ ಕುರಿತು ಲೇಖನಗಳನ್ನು ಬರೆದರು.

ಪ್ರಾಚ್ಯವಸ್ತು ಶಾಸ್ತ್ರಜ್ಞರು ಮತ್ತು ಸಾಹಿತ್ಯ ಪಂಡಿತರ ವಿಷಯವಾಗಿ ರೈಸ್‌ರಿಗೆ ವಿಶೇಷ ಗೌರವ ಇತ್ತು. ಅವರು ಫ್ಲೀಟರ್ ಬಗೆಗೆ ಮೃತ್ಯಾ ಲೇಖನದಲ್ಲಿ ಆಡಿದ ಮಾತುಗಳು ಮುಕ್ತ ಮನಸ್ಸಿನಿಂದ ಕೂಡಿದ್ದು, ಅವರು ಫ್ಲಿಟರ್‌ನ್ನು ಎಷ್ಟು ಗೌರವದಿಂದ ಕಂಡಿರುವುದನ್ನು ತೋರಿಸುತ್ತದೆ.

**ಬಿ.ಎಲ್. ರೈಸ್‌ರ ಮರಣ:**

ರೈಸ್‌ರು ಕರ್ನಾಟಕವನ್ನು ಕುರಿತು ಅನೇಕ ಕೃತಿಗಳನ್ನು ಬರೆದು, ಅವರು ತಮ್ಮ ೮೦ನೇ ವಯಸ್ಸಿನಲ್ಲಿ ಅಂದರೆ ೧೯೨೭ನೇಯ ಜುಲೈ ೧೦, ರಂದು ಮರಣ ಹೊಂದಿದ್ದರು. ರೈಸ್‌ರು ಸಿ.ಆಯ್.ಇ. ಮೈಸೂರು ಮತ್ತು ಕೂರ್ಗಂಗಳ ಡಾಯರೆಕ್ಟರ್ ಆಫ್ ಇನ್‌ಸ್ಟ್ರಕ್ಸನ್ ಮೈಸೂರಿನಲ್ಲಿ ಡೈಯರೆಕ್ಟರ್ ಆಫ್ ಆರ್ಶಿಯ ಜಿರಲ್ ರಿನರ್ಜಿಸ್ ಮೈಸೂರು ಅಫ್ ಕೂರ್ಗ ಗ್ಯಾಯಿಟ್‌ರುಗಳ ಮತ್ತು ಭಾರತ ಇಂಗೇರಿಯಲ್ ಗ್ಯಾಯಿಟ್‌ರುಗಳ ಸಂಪಾದಕರು ಆಗಿದ್ದರು. ಈ ಎಲ್ಲಾ ಹುದ್ದೆಗಳಿದ್ದಾಗ ಅವರು ತಮ್ಮ ಕೆಳಗಿನವರ ಸಹಾಯ ಪಡೆದರು. ಇವರ ಅವಿಶ್ರಾಂತ ದುಡಿಮೆಯ ಫಲವಾಗಿ ಕನ್ನಡ ನಾಡಿನ ಗತಕಾಲದ ಇತಿಹಾಸ ಬೆಳಕು ಕಾಣುವಂತಾಗಿದೆ. ಇವರ ಹುಟ್ಟು ಈ ನಾಡಿನಲ್ಲೇ ಆಗಿ, ಅವರ ದುಡಿಮೇ ಈ ಕನ್ನಡ ನಾಡಿಗೆ ಮೀಸಲಾದುದ್ದು ಒಂದು ಅಪೂರ್ವ ದಾಖಲೆ. ಕರ್ನಾಟಕದ ಇತಿಹಾಸ ಸಂಶೋಧಕರಿಗಂತೂ 'ರೈಸ್' ಒರ್ವ ಅಜರಾಮನಾದ ವ್ಯಕ್ತಿಯಾಗಿದ್ದಾರೆ.

**

## ೨. ಡಾ|| ಜೆ.ಎಫ್. ಫ್ಲೀಟ್ ಕ್ರಿ.ಶ.-೧೮೪೭-೧೯೧೭

**ಪರಿಚಯ:**


ಡಾ|| ಜೆ.ಎಫ್. ಫ್ಲೀಟ್

ಭಾರತ ಖಂಡಕ್ಕೂ, ಕನ್ನಡ ನಾಡಿಗೂ ವಿಶೇಷ ಸೇವೆ ಸಲ್ಲಿಸಿದ ಪಾಶ್ಚಾತ್ಯ ವಿದ್ವಾಂಸರಲ್ಲೊಬ್ಬರಾದ ಜಾನ್ ಫಯ್ತ್‌ಫುಲ್ ಫ್ಲೀಟ್ ಇವರು ಕರ್ನಾಟಕ ಇತಿಹಾಸದಲ್ಲಿ ಬಿ.ಎಲ್. ರೈಸ್‌ರಂತೆ ಗಮನಾರ್ಹ ಸ್ಥಾನವುಳ್ಳ ವ್ಯಕ್ತಿಯಾಗಿದ್ದಾರೆ. ಇವರು ಸಮರ್ಥ ಆಡಳಿತಾಧಿಕಾರಿ ಯಾಗಿದಂತೆಯೇ ಶ್ರೇಷ್ಠ ಸಂಶೋಧಕರೂ ಆಗಿದ್ದರು. ಇವರು ಭಾರತಕ್ಕೆ ಬಂದು ಮುಂಬಯಿ ಪ್ರಾಂತ್ಯದ ಶಾಸನಗಳ ಸಂಶೋಧನೆಗೆ ತೊಡಗಿದ್ದರು. ಇವರು ಕರ್ನಾಟಕ ಚರಿತ್ರೆಯಲ್ಲಿ ಸಲ್ಲಿಸಿದ ಸೇವೆ ಚಿರಸ್ಮರಣೀಯವಾಗಿದೆ.

**ಜನನ:**

ಜೆ.ಎಫ್ ಫ್ಲೀಟ್‌ರವರು ಕ್ರಿ.ಶ. ೧೮೪೭ರಲ್ಲಿ ಇಂಗ್ಲೆಂಡಿನ ಚಿಸ್ವಿಕ್ ಎಂಬಲ್ಲಿ ಜನಿಸಿದ್ದರು. ಜಾರ್ಜ್ ಫ್ಲೀಟ್ ಇವರ ತಂದೆ ಎಸ್ತರ್ ಫೇಥಫುಲ್. ಇವರ ತಾಯಿ. ಈ ದಂಪತಿಗಳ ಮಗನಾಗಿ ಜನಿಸಿದ್ದರು.

**ಶಿಕ್ಷಣ:**

"ಇವರ ಪ್ರಾರಂಭಿಕ ವಿದ್ಯಾಭ್ಯಾಸವನ್ನು ಲಂಡನ್ನಿನ ಮಾರ್ಚಂಟ್ ಟೆಲುರ್ ಶಾಲೆಯಲ್ಲಿ ಶಿಕ್ಷಣ ಪಡೆದರು. ಆ ನಂತರ ಅವರು ಇಂಡಿಯನ್ ಸಿವಿಲ್ ಸರ್ವಿಸ್ ಪರೀಕ್ಷೆಯನ್ನು ೧೮೬೫ರಲ್ಲಿ ಪಾಸಾದರು. ನಂತರ ಲಂಡನ್ ಮಹಾವಿದ್ಯಾಲಯದಲ್ಲಿ 'ಪ್ರೊ|| ಗೋಲ್ಡಸ್ಟಕರ್' ಎಂಬ ವಿದ್ವಾಂಸರ ಹತ್ತಿರ ಸಂಸ್ಕೃತ ವಿದ್ಯಾಭ್ಯಾಸ ಮಾಡಿದರು".

**ಕೃತಿಗಳು:**

ಫ್ಲೀಟ್ ರವರು ೫ ಮಹತ್ವದ ಗ್ರಂಥಗಳನ್ನು, ೪೫೩ ಲೇಖನಗಳನ್ನು ಬರೆದಿದ್ದಾರೆ. ಆ ಗ್ರಂಥಗಳು ಮತ್ತು ಲೇಖನಗಳು ಲಿಪಿಶಾಸ್ತ್ರ, ಶಾಸನಶಾಸ್ತ್ರ, ಕಾಲಿಪಣನಾಶಾಸ್ತ್ರ, ಸಂಖ್ಯೆಗಳು, ಐತಿಹಾಸಿಕ, ಬೋಗುಳ, ನಾಣ್ಯಗಳು, ಐತಿಹಾಸಿಕ ಲಾವಣಿಗಳು, ಶಬ್ದಗಳು ಮುಂತಾದ ವಿಷಯಗಳನ್ನು ಒಳಗೊಂಡಿದೆ. ಅವರಿಗೆ ಪಾಲಿ, ಸಂಸ್ಕೃತ, ಕನ್ನಡ, ಮರಾಠಿ ಮುಂತಾದ ವಿಷಯಗಳನ್ನೊಳಗೊಂಡಿವೆ. ಅವರು

ಮುಂಬಯಿ ಇಲಾಖೆಯಲ್ಲಿ, ಅವರಲ್ಲಿಯೇ ಮುಖ್ಯವಾಗಿ ಕರ್ನಾಟಕದಲ್ಲಿ ಸೇವೆ ಸಲ್ಲಿಸಿ ಉತ್ತರ ಕರ್ನಾಟಕ ಇತಿಹಾಸವನ್ನು ರಚಿಸುವಲ್ಲಿ ಅಗ್ರಗಣ್ಯರಾಗಿದ್ದಾರೆ

- ಮುಂಬಯಿ ಪ್ರಾಂತ್ಯದ ಕನ್ನಡ ಜಿಲ್ಲೆಗಳ 'ರಾಜ ಮನೆತನಗಳು' ಎಂಬ ಪುಸ್ತಕವು ೧೮೯೬ರಲ್ಲಿ ಪ್ರಕಟವಾಗಿದೆ.
- ಪ್ರಾಚೀನ ಗುಪ್ತರ ರಾಜರು ಮತ್ತು ಅವರ ಉತ್ತರಾಧಿಕಾರಿಗಳ ಶಾಸಗಳು ಎಂಬ ಕೃತಿಯು ೧೮೮೮ ರಲ್ಲಿ ಹೊರಬಂದಿತ್ತು.
- ೧೮೭೮ರಲ್ಲಿ ಪಾಳಿ, ಸಂಸ್ಕೃತ ಮತ್ತು ಹಳೆ ಗನ್ನಡ ಕೃತಿ ಪ್ರಕಟವಾಗಿತು.
- "ಡಾಯನೆಸ್ಟಿಜ್ ಆಫ್ ಕ್ಯಾನ್‌ರಿಲಸ್ ಡಿಸ್ಟ್ರಿಕ್ಟ್ಸ್"[೭]

**ಫ್ಲೀಟ್‌ರವರು ಸಲ್ಲಿಸಿದ ಸೇವೆ:**

೧೮೬೭ರಲ್ಲಿ ಮುಂಬೈ ಸರ್ಕಾರದ ಕಂದಾಯ ಇಲಾಖೆಯಲ್ಲಿ ಸೇವೆಯನ್ನು ಕೈಗೊಂಡರು. ಅವರು ಸಹಾಯಕ ಕಲೆಕ್ಟರ್ ದಕ್ಷಿಣ ವಿಭಾಗ ವಿದ್ಯಾಧಿಕಾರಿ, ಕೋಲಾಪೂರ ಮತ್ತು ದಕ್ಷಿಣ ಮಹಾರಾಷ್ಟ್ರದ ಸಹಾಯಕ ಪೊಲಿಟಿಕಲ್ ಏಜಂಟ್ (೧೮೭೫) ಭಾರತ ಸರ್ಕಾರದ ಶಾಸನ ಶಾಸ್ತ್ರತಜ್ಞ (೧೮೮೩-೮೬) ಸೋಲಾಪೂರದ ಜೂನಿಯರ್ ಕಲೆಕ್ಟರ್ (೧೮೮೬) ದಕ್ಷಿಣ ಮತ್ತು ಮಧ್ಯ ವಿಭಾಗಗಳ ಕಮೀಷನರ್ ತತ್ಪಮ್ಯ ಕಮೀಷನರ್ ಮೊದಲಾದ ಹುದ್ದೆಗಳಲ್ಲಿ ಕೆಲಸ ಮಾಡಿ, ೧೮೯೭ರಲ್ಲಿ ನಿವೃತ್ತರಾದರು. ಇವರು ಕಂದಾಯ ಇಲಾಖೆಯಲ್ಲಿದ್ದರೂ, ಇಲ್ಲಿನ ಇತಿಹಾಸದ ಬಗ್ಗೆ ಅತ್ಯಂತ ಹೆಚ್ಚಿನ ಕಾಳಜಿ ವಹಿಸಿದ್ದರು. ಬಿ.ಎಲ್.ರೈಸ್ ಮೈಸೂರು ಸಂಸ್ಥಾನದಲ್ಲಿ ಮಾಡಿದ ಕಾರ್ಯವನ್ನು ಇವರು ಉತ್ತರ ಕರ್ನಾಟಕದಲ್ಲಿ ಮಾಡಿದ್ದಾರೆ. ಇತಿಹಾಸ ಸಮಗ್ರವಾಗಿ ಸಂಗ್ರಹಿಸುವಲ್ಲಿ ಇವರು ತೋರಿಸಿದ ಜಾಣ್ಮೆ, ಅವುಗಳ ಸಂಗ್ರಹದಲ್ಲಿರಬೇಕಾದ ವೈಜ್ಞಾನಿಕ ತಳಪಾಯ ಮೆಚ್ಚುವಂತಹುದಾಗಿದೆ. ಕೆಲವೊಮ್ಮೆ ರೈಸ್ ಅವರು ಪುರಾಣವನ್ನು ಆಧಾರವಾಗಿಸಿಕೊಂಡರೆ, ಫ್ಲಿಟ್ ಅವುಗಳ ವೈಜ್ಞಾನಿಕ ಅಧ್ಯಯನಕ್ಕೆ ಮಹತ್ವ ನೀಡುತ್ತಿದ್ದುದು ಗಮನಾರ್ಹವಾಗಿದೆ. ಅವರು ಸಾಮಾನ್ಯ ಜನರೊಡನೆ ಬೆರೆತು ಕನ್ನಡ ಐತಿಹಾಸಿಕ ಲಾವಣಿಗಳನ್ನು ಸಂಪಾದಿಸಿ, ಅವುಗಳನ್ನು ಇಂಗ್ಲಿಷ್ ಭಾಷಾಂತರದೊಡನೆ ಪ್ರಕಟಿಸಿದ್ದಾರೆ. ಕರ್ನಾಟಕದಲ್ಲಿ ಅವರು ಸಾವಿರಕ್ಕೂ ಮೇಲ್ಪಟ್ಟು ಶಾಸನಗಳನ್ನು ಸಂಗ್ರಹಿಸಿ, ಅವುಗಳನ್ನು ಓದಿ, ಪರಿಷ್ಕರಿಸಿ, ಭಾಷಾಂತರಿಸಿ, ಟಿಪ್ಪಣಿಗಳ ಸಹಿತ ಪ್ರಕಟಿಸಿದ್ದಾರೆ. ಫ್ಲೀಟ್‌ರು ತಮ್ಮ ಪಾಂಡಿತ್ಯ ಲೇಖನಗಳನ್ನು 'ಮುಂಕ್ಲಿಯ ಏಶಿಯಟಿಕ್ ಸೋಸೈಟಿಯ ಮತ್ತು ಇಂಡಿಯನ್ ಆಂಟಿಕ್ವರಿ' ಎಂಬ ನಿಯತಕಾಲಿಕೆಗಳಲ್ಲಿ ಪ್ರಕಟ ಮಾಡುತ್ತಿದ್ದರು. ಫ್ಲೀಟ್‌ರು ಮಾಡಿದ ಕಾರ್ಯವನ್ನು ಲಕ್ಷಿಸಿ ಭಾರತ ಸರ್ಕಾರವು 'ಶಾಸನ ತಜ್ಞ' ಎಂಬ ಸ್ಥಾನವನ್ನು ಹೊಸದಾಗಿ ನಿರ್ಮಿಸಿ ಆ ಸ್ಥಾನಕ್ಕೆ ಫ್ಲಿಟ್‌ರನ್ನು ನೇಮಿಸಿತ್ತು. ಈ ಸ್ಥಾನದಲ್ಲಿ ಅವರು ೧೮೮೩-೮೬ರ ವರೆಗೆ ಕೆಲಸ ಮಾಡಿದ್ದರು. ಈ ರೀತಿಯಾಗಿ ಫ್ಲೀಟ್ ರವರು ಕಂದಾಯ ಇಲಾಖೆಯಲ್ಲಿ ಸೇವೆ ಮಾಡಿದರು. ಇತಿಹಾಸದಲ್ಲಿ ಅಪಾರವಾದ ಸೇವೆ ಸಲ್ಲಿಸಿದ್ದಾರೆ.

**ಡಾಯಸಿಸ್ಟಮ್ ಆಫ್ ಕ್ಯಾನಲೀಹ ಡಿಸ್ಟ್ರಿಕ್ಟ್ಸ್ ಗ್ರಂಥದ ಮಹತ್ವ:**

"ಫ್ಲೀಟ್‌ರವರು ೧೮೯೬ರಲ್ಲಿ ಸಿದ್ಧಪಡಿಸಿದ ಈ ಗ್ರಂಥವು ಮುಂಬೈ ಗ್ಯಾಯಿಬೇಯರಿನ್ ಒಂದನೆ ಸಂಪುಟದ ಎರಡನೇ ಭಾಗದಲ್ಲಿ ಪ್ರಕಟವಾಗಿದೆ. ಈ ಗ್ರಂಥವನ್ನು ತಯಾರಿಸಲು ಅವರು ಮುಂಬಯಿ-ಕರ್ನಾಟಕದ ನೂರಾರು ಶಾಸನಗಳನ್ನು ಅಭ್ಯಾಸ ಮಾಡಿದ್ದಾರೆ. ಅವರು ಈ ಗ್ರಂಥದಲ್ಲಿ ಮೊದಲು ಮೌರ್ಯ ಸಾಮ್ರಾಜ್ಯದ ಅಶೋಕ ವಿಣ್ಣುಕಡದಂದು ಮತ್ತಿ ಚಿತ್ರವ, ಗೌತಮಿ ಪುತ್ರ ಶಾತಕರ್ಣಿ ಬಗೆಗೆ ಹೇಳಿದ್ದಾರೆ. ಆ ನಂತರ ಚಾಳುಕ್ಯರ ೬ನೇ ಕೀರ್ತಿವರ್ಮನಲ್ಲಿದ್ದ ನಂದ, ಮೌರ್ಯ ಮತ್ತು ಕದಂಬರ ವಿಷಯವಾಗಿ ವಿವರಿಸಿರುವರು. ಆ ತರುವಾಯ ಮುಂಬೈ-ಕರ್ನಾಟಕದಲ್ಲಿ ಸಾರ್ವಭೌಮರಾದ ಬಾದಾಮಿ ಚಾಳುಕ್ಯರು, ಮಳಖೇಡದ ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಯ ಪಿಲುಗಿರಿಯ ಸೇವುಣರು, ಯಾದವರು, ದ್ವಾರಸಮುದ್ರ ಹೊಯ್ಸಳರು ಇತ್ಯಾದಿ ವಂಶಗಳ ಕುರಿತು ವಿವೇಚಿಸಿ ಆ ಮನೆತನಗಳ ಮಾಂಡಲಿಕರಾದ, ಹಾನಗಲ್ಲು ಮತ್ತು ಗೋವಾ ಕದಂಬರ ದತ್ತಿಯ ಶಟ್ಟರು, ಶೀಲಾಹಾರರು ಮುಂತಾದವರ ಬಗ್ಗೆ ಬರೆದಿರುವುದು"[೮]

ಫ್ಲೀಟ್‌ರು ಶಾಸನಗಳ ಸಂಪುಟ ಅಧ್ಯಯನ ಮಾಡುವ ಜೊತಗೆ ಐತಿಹಾಸಿಕ ಲಾವಣಿಗಳನ್ನು ಸಂಗ್ರಹಿಸಿದ್ದರು. ಅವರು ಸಂಗ್ರಹಿಸಿದ ೧೩ ಲಾವಣಿಗಳನ್ನು ಕಿತ್ತೂರು, ಈರಪ್ಪನ ಗೋಳಾದ ಸಂಗೋಳ್ಳಿ ರಾಯಣ್ಣನ ದಂಗೆ, ಇಂಗ್ಲಿಷರಿಂದ ಬಾದಾಮಿಯ ರಣ ಮಂಡಲ ಕೋಟೆಯ ಆಕ್ರಮಣ ಇತ್ಯಾದಿ ವಿಷಯಗಳಿಗೆ ಫ್ಲಿಟರು ಪ್ರತಿ ಒಂದು ಲಾವಣಿಗೆ ಪೀಠಿಕೆ ಬರೆದು, ಅವರ ಪಾಠವನ್ನು ಇಂಗ್ಲೀಷ ಅಕ್ಷರಗಳನ್ನು ಕೊಟ್ಟ ಸ್ವರ .ಪ್ರಸ್ತಾರ ಹಾಕಿ ಇಂಗ್ಲಿಷ ಭಾಷಾಂತರ ಸಹಿತ ಪ್ರಕಟಿಸಿದ್ದಾರೆ.

"ಫ್ಲೀಟ್‌ರು ಇಂಗ್ಲೀಷ ರಾಯಲ್ ಏಶಿಯಟಿಕ್ ಸೊಸೈಟಿಯ ಗೌರವ ಕಾರ್ಯದರ್ಶಿಯಾಗಿ ೧೯೦೬-೧೯೧೭ರ ವರೆಗೆ ಕೆಲಸ ಮಾಡಿದ್ದರು. ಅವರು ಮಾಡಿದ ಸಂಶೋಧನೆಗಳಿಗಾಗಿ ಆ ಸೋಸೈಟಿಯು ಅವರಿಗೆ ೧೯೧೨ರಲ್ಲಿ ಬಂಗಾರ ಪದಕ ಕೊಟ್ಟು ಗೌರವಿಸಿತು"[೯].

**ಮರಣ:**

೧೮೯೭ರಲ್ಲಿ ಫ್ಲೀಟರು ನಿವೃತರಾದ ಮೇಲೆ ಅವರು ಇಂಗ್ಲೆಂಡಿಗೆ ಹೋಗಿ ಈಟಿಂಗಿನಲ್ಲಿ ವಾಸಮಾಡಿದ್ದರು. ೧೯೧೭ರಲ್ಲಿ ಇಹರೋರ್‌ದ ಯಾತ್ರೆ ಮುಗಿಸಿದರು.

**ವ್ಯಕ್ತಿತ್ವ:**

ಇವರು ಅಖಿಲ ಭಾರತ ಮಟ್ಟದ ಮಾಡಿದ ಕಾರ್ಯ ವಿಶೇಷವಾಗಿದೆ. ಇವರಿಗೆ 'ಕರ್ನಾಟಕ ಶಾಸನ ಪಿತಾಮಹಾ'ನೆಂದು ಹೇಳಿದರೆ ತಪ್ಪಾಗಲಾರದು.

ರನಿಂಗ್ಯಾಮ್, ಉಚೇಗ್ ಬೂಲರ್, ರೆಲ್ಹಾರ್ನ್ ಹುಲ್ಷ್ ಮತ್ತು ರೈಸ್‌ರಂತೆ ಅವರು ಭಾರತದ ಪ್ರಾಚೀನ ಇತಿಹಾಸ ಮತ್ತು ಶಾಸನ ಶಾಸ್ತ್ರಕ್ಕೆ ಮಹತ್ವದ ಕೊಡುಗೆಗಳನ್ನು ನೀಡಿದ್ದಾರೆ. ಇವರು ಇಂಡಿಯನ್ ಆಂಟಿಕ್ವರಿ ಮತ್ತು ಎಫಿಗ್ರಾಫಿಯ ಕಾರಣರಾಗಿ ಅವುಗಳಲ್ಲಿ ಅಮೂಲ್ಯ ತಿಲ್ಯಾಗಳನ್ನು ಪ್ರಕಟಿಸಿದ್ದಾರೆ. ಇಂಡಿಯನ್ ಆಂಟಿಕ್ವರಿಯು ೬೨ ಸಂಪುಟಗಳನ್ನು ಹೊರತಂದರು. ಆದರೆ ಅದು ನಿಂತು ಹೋಯಿತು. ಪ್ರತಿಭಾವಂತರಾದ ಇವರು ಕರ್ನಾಟಕ ಚರಿತ್ರೆಗೆ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿ, ಅಪಾರವಾದ ಕೊಡುಗೆಗಳನ್ನು ನೀಡಿದ್ದಾರೆ. ಇವರ ಸಾಧನೆಯನ್ನು ಕನ್ನಡಗಿರು ಎಂದಿಗೂ ಮರೆಯಲು ಸಾಧ್ಯವಿಲ್ಲ.

**

## ೩. ಆರ್. ನರಸಿಂಹಾಚಾರ್ ಕ್ರಿಶ. ೧೮೬೦-೧೯೩೬

**ಪರಿಚಯ:**



ಆರ್. ನರಸಿಂಹಾಚಾರ್

ಕರ್ನಾಟಕದ ನಾಣ್ಯ ಹಾಗೂ ಶಾಸನ ತಜ್ಞರಲ್ಲಿ ಖ್ಯಾತನಾಮರಾಗಿರುವ ನರಸಿಂಹಾಚಾರ್‌ರು ಇತಿಹಾಸ ರಚನೆಗೆ ಮಹತ್ತರ ಕೊಡುಗೆಗಳನ್ನು ಸಲ್ಲಿಸಿದ್ದಾರೆ. ಇವರು ಕರ್ನಾಟಕ ಚರಿತೆಕಾರರು, ಸಂಶೋಧನ ಸಂಪಾದನೆ ಮುಂತಾದ ಹಲವು ಕ್ಷೇತ್ರಗಳಿಗೆ ಮೌಲಿಕ ಕೆಲಸ ಮಾಡಿದ ಮಹಾನ್ ಇತಿಹಾಸಕಾರರಲ್ಲಿ ಇವರು ಒಬ್ಬರು. ಇವರು ಕರ್ನಾಟಕ ಚರಿತ್ರೆಗೆ ಸಲ್ಲಿಸಿದ ಸೇವೆ ಮತ್ತು ಸಾಧನೆಯನ್ನು ಎಂದಿಗೂ ಮರೆಯುವಂತಿಲ್ಲ.

**ಜನನ :**

ಆರ್. ನರಸಿಂಹಾಚಾರ್ ರವರು ಮಂಡ್ಯದ ಕೊಪ್ಪಲಿನಲ್ಲಿ ೦೯.೦೪.೧೮೬೦ ರಲ್ಲಿ ಜನಿಸಿದರು. ಇವರ ತಂದೆ ತಿರುನಾರಾಯಣ ಪೆರುಮಾಳ್, ತಾಯಿ ಶಿಂಗಮ್ಮಾಳ್.

**ಶಿಕ್ಷಣ :**

ಇವರು ತಮ್ಮ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ತಮ್ಮ ಹುಟ್ಟೂರಿನಲ್ಲಿ ಮುಗಿಸಿ ನಂತರ ಮೈಸೂರು ಮಹಾರಾಜ ಕಾಲೇಜು ಮತ್ತು ಬೆಂಗಳೂರು ಸೆಂಟ್ರಲ್ ಕಾಲೇಜುಗಳಲ್ಲಿ ಅಧ್ಯಯನ ಮಾಡಿದರು. ಇವರು ಕನ್ನಡ, ತಮಿಳು ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಅಪಾರ ಪಾಂಡಿತ್ಯ ಗಳಿಸಿದರು.

**ಪ್ರಶಸ್ತಿಗಳು:**

೧) ೧೯೦೭ ರಲ್ಲಿ ರಾಯಲ್ ಎಷ್ಯಾಟಿಕ್ ಸೊಸೈಟಿ ಗೌರವ ಸದಸ್ಯತ್ವ

೨) ೧೯೧೩ ರಲ್ಲಿ ಪ್ರಕ್ತನ ವಿಮರ್ಶ ವಿಚಕ್ಷಣ ಪ್ರಶಸ್ತಿ ಮೈಸೂರು ಮಹಾರಾಜರಿಂದ.

೩) ೧೯೧೬ ರಲ್ಲಿ ಬ್ರಿಟೀಷ್ ಸರಕಾರದಿಂದ ರಾವ್ ಬಹಾದ್ದೂರ ಪ್ರಶಸ್ತಿ.

೪) ೧೯೨೪ ರಲ್ಲಿ ಕಲ್ಕತ್ತಾ ಅಖಿಲ ಭಾರತ ಸಾಹಿತ್ಯ ಸಂಘ ಪ್ರಾಚ್ಯ ವಿದ್ಯಾ ವೈಭವ ಬಿರುದು.

೫) ೧೯೩೪ ರಲ್ಲಿ ಕೇಂದ್ರ ಸರ್ಕಾರ ಮಹಾಮಹೋಪಾಧ್ಯಾಯ ಪ್ರಶಸ್ತಿ.

ಹೀಗೆ ಆರ್. ನರಸಿಂಹಾಚಾರ್‌ರವರು ಹತ್ತು ಹಲವಾರು ಪ್ರಶಸ್ತಿಗಳನ್ನು ಪಡೆದು ಹೆಸರುವಾಸಿಯಾಗಿದ್ದಾರೆ[೧೦].

**ಸಾಧನೆ :**

ಆರ್. ನರಸಿಂಹಾಚಾರ್‌ರವರು ೧೬ ವರ್ಷಗಳ ಕಾಲ ಪುರಾತತ್ವ ಇಲಾಖೆಯಲ್ಲಿ ನಿರ್ದೇಶಕರಾಗಿದ್ದರು. ನಂತರ ಮೈಸೂರು ಸರಕಾರದಲ್ಲಿ ಭಾಷಾಂತರಕಾರರಾಗಿ, ಪ್ರಾಚ್ಯ ಸಂಶೋಧನ ಕೇಂದ್ರದ ಮುಖ್ಯಾಧಿಕಾರಿಯಾಗಿ ಹಲವು ಗ್ರಂಥ ರಚನೆ ಮಾಡಿದರು. ಮೈಸೂರು ಸಂಸ್ಥಾನದಲ್ಲಿದ್ದಾಗ ಶಾಸನಗಳನ್ನೆಲ್ಲ ಪರಿಷ್ಕರಣೆ ಮತ್ತು ನಾಣ್ಯಗಳ ಸಂಗ್ರಹ ಮತ್ತು ಉತ್ಖನನ ಕಾರ್ಯದಲ್ಲಿ ಅನುಪಮ ಸೇವೆ ಸಲ್ಲಿಸಿದರು. ಹಾಗೂ ಶಾಸನ ಸಂಗ್ರಹ ಮತ್ತು ಅಧ್ಯಯನ ಕಾರ್ಯದಲ್ಲಿ ಬಿ.ಎಲ್. ರೈಸರಿಗೆ ಅಪಾರ ನೆರವು ನೀಡಿದರು. ೧೯೦೬ ರಿಂದ ೨೨ ರ ವರೆಗೆ ಇವರ ಸಂಶೋಧನ ಕಾರ್ಯ ನಿರಂತರವಾಗಿ ನಡೆಯಿತು. ಆ ಸಂದರ್ಭದಲ್ಲಿ ಇವರು ಹಿಂದು, ಜೈನ ಮತ್ತು ಮಹ್ಮದಿಯರಿಗೆ ಸಂಬಂಧಪಟ್ಟ ಸಾವಿರ ಕಟ್ಟಡಗಳನ್ನು ಪರೀಕ್ಷಿಸಿದರು. "ಇವರ ನೇತೃತ್ವದಲ್ಲಿ ೫೦೦ ಶಾಸನಗಳು, ೪೦೦ ನಾಣ್ಯಗಳ ಸಂಶೋಧನೆ ಮಾಡಿದರು. ನಂತರ ೧೨೫೦ ಛಾಯಾ ಚಿತ್ರಗಳು ಮತ್ತು ೧೨೦ ನಕಾಶೆಗಳು ರಚನೆಯಾದವು. ಸುಮಾರು ೧೦೦೦ ಪ್ರಾಚೀನ ಸ್ಮಾರಕಗಳು ಅಧ್ಯಯನ ಮಾಡಲ್ಪಟ್ಟವು"[೧೧]. ಎ.ಪಿ. ಗ್ರಾಫಿಯ ಕರ್ನಾಟಕದ ವಿಸ್ತಾರವಾದ ಅಕಾರಾದಿ ಇಲಾಖಾ ವರದಿಗಳು ಐತಿಹಾಸಿಕ ಮತ್ತು ಸಾಮಾಜಿಕ ಪ್ರಮುಖವುಳ್ಳ ಶಾಸನ ಸಂಗ್ರಹಗಳನ್ನು ಸಿದ್ಧಪಡಿಸಿದರು.

ಆರ್. ನರಸಿಂಹಾಚಾರ್‌ರವರು ರೈಸ್ ಪ್ರಕಟಿಸಿದ ಶ್ರವಣಬೆಳಗೊಳದ ಶಾಸನಗಳನ್ನೊಳಗೊಂಡ ಎಪಿಗ್ರಾಫಿಯ ಕರ್ನಾಟಕದ ಮೂರನೇ ಸಂಪುಟವನ್ನು ಇವರು ಪೂರ್ಣವಾಗಿ ಪರಿಷ್ಕರಿಸಿದರು. ಮೊದಲು ೧೪೪ ಇದ್ದ ಶಾಸನಗಳ ಸಂಖ್ಯೆ ಪರಿಷ್ಕರಿತ ಆವರ್ತಿಯಲ್ಲಿ ೫೦೦ ಆಯಿತು. ಶ್ರವಣಬೆಳಗೋಳದ ಬಸದಿಗಳ ವಿವರಗಳನ್ನೊಳಗೊಂಡ ವಿಸ್ತಾರವಾದ ಮುನ್ನುಡಿಯನ್ನು ಈ ಸಂಪುಟಕ್ಕೆ ಬರೆದರು.

ಸೋಮನಾಥಪೂರದ ಕೇಶವ, ಬೇಲೂರಿನ ಚೆನ್ನಕೇಶವ, ದೊಡ್ಡ ಗದ್ದವಳಿಯ ಮಹಾಲಕ್ಷ್ಮೀ ದೇವಾಲಯಗಳ ಶಿಲ್ಪಗಳನ್ನು ಪರಿಚಯಿಸುವ ಕೈಪಿಡಿಗಳನ್ನು ಪ್ರಕಟಿಸಿದರು. ಚಂದ್ರಾವಳಿ, ತಲಕಾಡು ಮತ್ತು ಹಳೆಬೀಡುಗಳಲ್ಲಿ ಭೂ ಸಂಶೋಧನೆಗಳನ್ನು ನಡೆಸಿ ಆಂಧ್ರ, ರೋಮನ್ನರ ಮತ್ತು ಪ್ರಾಚೀನ ಶಿಲ್ಪಗಳ ಬಗ್ಗೆ ಸಂಶೋಧನಾತ್ಮಕ ಟಿಪ್ಪಣಿಗಳನ್ನು ಬರೆದಿರುವುದು ಇವರ ಬಹುಮುಖ್ಯ ಸಾಧನೆ. ಚಾಲುಕ್ಯ ಶಿಲ್ಪದ ಭಾಗವೆಂದು ಅದುವರೆಗೂ ಪರಿಗಣಿಸಲ್ಪಟ್ಟಿದ್ದ ಹೊಯ್ಸಳ ಕಟ್ಟಡಗಳಲ್ಲಿ ಕಂಡುಬರುವ ಶೈಲಿಯ ವಿಶಿಷ್ಟತೆಯನ್ನು ಗುರುತಿಸಿ ಅದಕ್ಕೆ ಹೊಯ್ಸಳ

ಶೈಲಿಯೆಂಬ ಪ್ರತ್ಯೇಕವಾದ ಹೆಸರುಕೊಟ್ಟ ಕೀರ್ತಿ ಇವರದು. ವಾಸ್ತು ಶಿಲ್ಪ ಶಾಸನ ಮತ್ತು ನಾಣ್ಯಗಳನ್ನು ಅನೇಕ ಸಂಶೋಧನ ಲೇಖನಗಳನ್ನು ವಿವಿಧ ಸೊಸೈಟಿಯ "ತ್ರೈಮಾಸಿಕ ಮತ್ತು ಇಂಡಿಯನ್ ಅಂಟೆಕ್ವೆರಿ ಪತ್ರಿಕೆ"ಗಳಲ್ಲಿ ಪ್ರಕಟಿಸಿದರು. ಭಾರತದ ಪ್ರಾಚ್ಯಾವಸ್ತುವಿದ್ದ ಇಲಾಖೆ ಏಷ್ಯಾಟಿಕ್ ಸೊಸೈಟಿ, ಬೆಂಗಳೂರಿನ ಮಿಥಿಕ್ ಸೊಸೈಟಿ ವಿದೇಶಿಗಳ ಸಂಘ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದರು.

**ಕೃತಿಗಳು :**

- ಬೇಲೂರು ಸೋಮನಾಥಪೂರು
- ಇಂಪಿರಿಯಲ್ ಗೆಜೆಟಿಯರ್
- ಪದ್ಯಶಾಸನ ಸಂಗ್ರಹ.
- ಗದ್ಯಶಾಸನ ಸಂಗ್ರಹ[೧೨]

**ಮರಣ :**

ಆರ್. ನರಸಿಂಹಾಚಾರ್‌ರವರು ೧೯೩೬ ರಲ್ಲಿ ಮರಣ ಹೊಂದಿದ್ದರು. ಇವರ ಮರಣದಿಂದ ಕರ್ನಾಟಕದ ಸಂಶೋಧನ ಕ್ಷೇತ್ರವು ಬಡವಾಗಿತ್ತು.

**ವ್ಯಕ್ತಿತ್ವ :**

ಪ್ರಾಚ್ಯಾವಸ್ತು ಸಂಶೋಧನ ಕೇಂದ್ರದ ಸಲಹೆಗಾರರಾಗಿ ಇತಿಹಾಸ ರಚನೆಕಾರದಲ್ಲಿ ಮರೆಯಲಾರದ ಕೆಲಸ ಮಾಡಿದ್ದಾರೆ. ಇವರು ಶಾಸನಗಳ, ನಾಣ್ಯಗಳ ಅಧ್ಯಯನ, ಸ್ಮಾರಕಗಳ ಮತ್ತು ಛಾಯಾ ಚಿತ್ರಗಳ ಸಂಗ್ರಹ ಮತ್ತು ನಕಾಶೆಗಳ ರಚನೆಗಳನ್ನು ಸಿದ್ಧಗೊಳಿಸುವ ಮೂಲಕ ಕರ್ನಾಟಕ ಇತಿಹಾಸ ರಚನೆಗೆ ಒಂದು ನೆಲೆಗಟ್ಟನ್ನು ದೊರಕಿಸಿದ್ದಾರೆ. ಇಂತಹ ಉತ್ತಮ ಸ್ವಭಾವ ಹೊಂದಿದ ಆರ್. ನರಸಿಂಹಾಚಾರ್ ರವರಿಗೆ ಕೃಷ್ಣರಾಜ ಒಡೆಯರ್‌ರವರು ಇವರ ಸಾಧನೆಗೆ ಮೆಚ್ಚಿ 'ರಾವ್ ಬಹದ್ದೂರ' ಎಂಬ ಪ್ರಶಸ್ತಿ ನೀಡಿ ಗೌರವಿಸಿದರು.

**

## ೪. ಸಿ. ಹಯವದನರಾವ ಕ್ರಿಶ.೧೮೬೪-೧೯೪೬

**ಪರಿಚಯ:**



ಸಿ. ಹಯವದನರಾವ

ಸಿ. ಹಯವದನರಾವ ರವರು ದಕ್ಷಿಣ ಭಾರತದ ಮತ್ತು ಮೈಸೂರು ರಾಜ್ಯದ ಇತಿಹಾಸದ ರಚನೆಯಲ್ಲಿ ಇವರು ಅಗ್ರಗಣ್ಯರಾಗಿದ್ದರು. ಪ್ರತಿಭಾವಂತರಾದ ಇವರು ತಮಿಳುನಾಡಿನಲ್ಲಿ ಜನಿಸಿ, ಕರ್ನಾಟಕದೊಂದಿಗೆ ಉತ್ತಮವಾದ ಸಂಬಂಧ ಹೊಂದಿದ್ದರು. ಜೊತೆಗೆ ಇವರು ಮೈಸೂರು ಒಡೆಯರ ಕುರಿತು ಇತಿಹಾಸವನ್ನು ರಚಿಸಿದರು. ಇವರು ಪ್ರತಿಭಾವಂತರಾದ ಕರ್ನಾಟಕ ಇತಿಹಾಸಕಾರರಲ್ಲಿ ಒಬ್ಬರು. ಇವರು ಕರ್ನಾಟಕ ಚರಿತ್ರೆಗೆ ಸಲ್ಲಿಸಿದ ಸೇವೆ ಗಣನೀಯವಾಗಿದೆ. ಇವರು ಕರ್ನಾಟಕ ಚರಿತ್ರೆಯಲ್ಲಿ ಮಾಡಿದ ಸಾಧನೆ ಚಿರಸ್ಮರಣೀಯವಾಗಿದೆ.

**ಜನನ:**

ಸಿ. ಹಯವದನರಾವ ರವರು ಮದ್ರಾಸ ಪ್ರಾಂತ್ಯದ ಕೃಷ್ಣಾಗಿರಿ ತಾಲ್ಲೂಕಿನ ಹೊಸೂರಿನಲ್ಲಿ ಜನಿಸಿದ್ದರು. ಅದು ಕನ್ನಡ ಗಡಿ ಪ್ರದೇಶವಾಗಿದ್ದರಿಂದ ಮೈಸೂರಿನೊಡನೆ ಇವರು ನಿಕಟ ಸಂಪರ್ಕ ಹೊಂದಿದ್ದರು.

**ಶಿಕ್ಷಣ:**

"ಸಿ. ಹಯವದನರಾವ ರವರು ತಮ್ಮ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ತಮ್ಮ ಹುಟ್ಟೂರಿನಲ್ಲಿ ಮುಗಿಸಿ, ನಂತರ ಅವರು ಕನ್ನಡ, ಇಂಗ್ಲಿಷ, ತೆಲುಗು, ತಮಿಳು, ಮರಾಠಿ, ಸಂಸ್ಕೃತ, ಲ್ಯಾಟಿನ್, ಫ್ರೇಂಚ್, ಜರ್ಮನ ಮೊದಲಾದ ಭಾಷೆಗಳನ್ನು ಆಳವಾಗಿ ಕಲಿತು ಪಾಂಡಿತ್ಯವನ್ನು ಗಳಿಸಿದ ಮಹಾನ್ ಪ್ರತಿಭಾವಂತರಾಗಿದ್ದರು. ಜೊತೆಗೆ ಇವರು ಉನ್ನತ ಶಿಕ್ಷಣ ಕೂಡ ಪಡೆದುಕೊಂಡರು"[೧೩]

**ಸಿ. ಹಯವದನರಾವ ರವರ ಸೇವೆ:**

ಇವರು ವಕೀಲರಾಗಿ ಪತ್ರಿಕೋದ್ಯಮಿಯಾಗಿ ಅರ್ಥಶಾಸ್ತ್ರಜ್ಞರು ಮತ್ತು ಸಮಾಜ ಸೇವಾಕರ್ತ ಹಾಗೂ ಇತಿಹಾಸಕಾರರಾಗಿ ಇವರು ಸೇವೆಯನ್ನು ಸಲ್ಲಿಸಿ ಬಹುಮುಖ ಪ್ರತಿಭೆಗೆ ಇವರು ಸಾಕ್ಷಿಯಾಗಿದ್ದಾರೆ. ನಂತರ ಇವರಿಗೆ ೧೯೨೪ರಲ್ಲಿ ಮೈಸೂರು ಸರ್ಕಾರ ಇವರನ್ನು "ಮೈಸೂರು ಗೇಜೆಟಿಯರ್‌ನ ಪ್ರಧಾನ

ಸಂಪಾದಕ"ರನ್ನಾಗಿ ನೇಮಕ ಮಾಡಿಕೊಂಡಿದ್ದರು. ಇವರ ನೇತೃತ್ವದಲ್ಲಿ ಏಳು ಸಂಪುಟಗಳ ಮೈಸೂರು ಗೆಜೆಟಿಯರ್ ಪ್ರಕಟವಾಯಿತ್ತು. ಈ ಗೆಜೆಟಿಯರ್‌ನಲ್ಲಿ ಇತಿಹಾಸ, ನಾಣ್ಯ ಶಾಸ್ತ್ರ, ಶಾಸನ ಶಾಸ್ತ್ರ, ಕಲೆ ಮತ್ತು ವಾಸ್ತು ಶಿಲ್ಪ, ಸ್ಥಳ ನಾಮ ಮತ್ತು ಅವುಗಳ ವಿವರ ಮೊದಲಾದ ವಿಷಯಗಳಿಗೆ ಹೆಚ್ಚಿನ ಆಧ್ಯತೆಯನ್ನು ನೀಡಲಾಗಿತ್ತು. ಈ ಗ್ರಂಥ ೧೯೩೦ರಲ್ಲಿ ಪ್ರಕಟಗೊಂಡಿತ್ತು.

"ಕೃತಿಗಳು

೧) ಮೈಸೂರ ಗೆಜೆಟಿಯರ್ ಈ ಮೇರು ಕೃತಿ ಮೂರು ಸಂಪುಟ ಒಳಗೊಂಡಿದೆ. (೨೮೪೦ ಪುಟಗಳು).

೨) ಹಿಸ್ಟರಿ ಆಫ್ ಮೈಸೂರ್(೧೯೩೨)"[೧೪]

ಈ ಬೃಹತ್ ಕೃತಿಯಲ್ಲಿ ರಾಜಕೀಯವಲ್ಲದೆ ಆರ್ಥಿಕ, ಸಮಾಜಿಕ, ಸಾಂಸ್ಕೃತಿಕ ವಿಷಯಗಳಿಗೆ ಮಹತ್ವವನ್ನು ನೀಡಲಾಗಿದೆ. ಮೈಸೂರು ಒಡೆಯರ ಸರ್ಕಾರದ ಪೋಷಣೆಯಲ್ಲಿದ್ದ, ಇವರು ಒಡೆಯರ ಪಕ್ಷಪಾತಿಯಾಗಿ ಇತಿಹಾಸ ರಚನೆ ಮಾಡಿದ್ದಾರೆ. ಹಾಗಾಗಿ ಒಡೆಯರ ಲೋಪದೋಷಗಳನ್ನು ಹಾಗೂ ಕುಂದು ಕೊರತೆಗಳನ್ನು ಮರೆಮಾಚಲಾಗಿದೆ.

**ಸಿ. ಹಯವದನರಾವ ರವರ ಐತಿಹಾಸಿಕ ಸಾಧನೆ:**

ಇವರು ಇತಿಹಾಸ ಕ್ಷೇತ್ರದಲ್ಲಿ ಮೊಟ್ಟ ಮೊದಲು ಮೈಸೂರು ಒಡೆಯರ ಕುರಿತು ಅಧ್ಯಯನ ಮಾಡಿ ಅವರ ಸಂಕ್ಷೀಪ್ತ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ವಿಷಯಗಳಿಗೆ ಸಂಬಂಧಿಸಿದಂತೆ, ಗ್ರಂಥವನ್ನು ರಚಿಸಿದ್ದಾರೆ. ಹಾಗೂ ಇವರು ಚಿಕ್ಕದೇವರಾಜ ಒಡೆಯರ ರೈತ ವಿರೋಧಿ ಧೋರಣೆ ಚತುರ್ವರ್ಣ ಸಮರ್ಥನೆ, ಶೂದ್ರರ ಮತ್ತು ಪಂಚಮರ ಶೋಷಣೆ ಅಸಮಾನತೆ ಮತ್ತು ಅನ್ಯಾಯಗಳನ್ನು ಉಪೇಕ್ಷಿಸಲಾಗಿದೆ. ಮುಮ್ಮಡಿ ಕೃಷ್ಣರಾಯನ ಒಡೆಯರ ದುಂದುಗಾರಿಕೆ ಮತ್ತು ದುರ್ಬಲ ಆಡಳಿತ ಹಾಗೂ ದಿವಾನರ ಆರಂಭದ ದೌರ್ಬಲ್ಯಗಳು ಅರಸು ಮನೆತನದ ಕಂದಾಯ ಅಧಿಕಾರಿಗಳ ದೌರ್ಜನ್ಯಗಳನ್ನು ಕೂಡಾ ಮರೆಮಾಚಲಾಗಿದೆ.

ಇವರ ಮೂರನೆ ಬ್ರಹತ್ ಸಂಪುಟ ಗ್ರಂಥವು ಬೃಹದಾಕಾರದಾಗಿದ್ದು, ಹೈದರ್ ಮತ್ತು ಟಿಪ್ಪುವಿನ ಕಾಲದ ಇತಿಹಾಸಕ್ಕೆ ಮೀಸಲಾಗಿದೆ. ಈ ಕೃತಿ ರಚನೆಯಲ್ಲಿ ಕನ್ನಡ, ಮರಾಠಿ, ತಮಿಳು, ತೆಲುಗು, ಮಲೆಯಾಳಿ ಭಾಷೆಗಳ ಶಾಸನಗಳ ಮತ್ತು ನಾಣ್ಯಗಳ ಮೊದಲಾದ ಪುರಾವೆಗಳಲ್ಲದೆ, ರಾಜ್ಯ ಪತ್ರಗಳು ಮತ್ತು ಒಪ್ಪಂದಗಳ ವಿವರಗಳನ್ನು ಸಮರ್ಥವಾಗಿ ಬಳಸಿಕೊಳ್ಳಲಾಗಿದೆ. ಇವಲ್ಲದೆ ಪೋರ್ಚಗಿಸ್, ಡಚ್, ಇಂಗ್ಲೀಷ್, ಫ್ರೆಂಚ್ ಭಾಷೆಗಳ ಮೂಲಕ ಕಾಗದ ಪತ್ರ ಮೈತ್ರಿ ಮತ್ತು ಒಪ್ಪಂದದ ದಾಖಲೆಗಳನ್ನು ವ್ಯಾಪಕವಾಗಿ ಬಳಸಿಕೊಳ್ಳಾಗಿದೆ.

"ಪ್ರಾಪ್ತ ವಯಸ್ಸಿಗೆ ಬಂದ ಒಡೆಯರಿಗೆ ವಿಷ ಕೊಟ್ಟು ಸಾಯಿಸಿ, ಅವನ ಸ್ಥಾನಕ್ಕೆ ಎಳೆಯ ಬಾಲಕರನ್ನು ಪಟ್ಟಕ್ಕೆ ತರುತಿದ್ದ ಹೈದರನ ಕುತಂತ್ರಗಳನ್ನು ವಿಶೇಷವಾಗಿ ಬಣ್ಣಿಸಲಾಗಿದೆ ಹಾಗೂ ಆಳರಸರ ಪರವಾದಿಯಾಗಿ ಹಯವದನರಾವ ಬ್ರಿಟಿಷ್ ಪ್ರಭುತ್ವವನ್ನು ಬೆಂಬಲಿಸಿದ್ದನು. ಹೈದರ ಮತ್ತು ಟಿಪ್ಪು ರವರ ಕಡು ವಿರೋಧಿಯಾಗಿದನು. ಹೈದರನು ಓರ್ವ ಅಧಿಕಾರ, ದುರಾಕ್ರಮಣಿ ಎಂದು ಪರಿಗಣಿಸಿ ಅವನ ದಿಗ್ವಿಜಯ ಹಾಗೂ ಇತರ ಸಾಧನೆಗಳನ್ನು ತನ್ನ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ"[೧೫].

**ವಿಮರ್ಶೆ:**

ಸಿ. ಹಯವದನರಾವ ರವರು ತಮ್ಮ ಕೃತಿಯಲ್ಲಿ ವಸ್ತು ನಿಷ್ಠತೆಗೆ ಕಳಂಕ ತಂದುಕೊಂಡಿದ್ದಾರೆ.

**ಉದಾರಹಣೆ:** ಹಾರನಹಳ್ಳಿಯ ವೀರಶೈವ ದೇವಾಲಯವನ್ನು ವೈಷ್ಣವ ದೇವಾಲಯವನ್ನಾಗಿ ಪರಿವರ್ತಿಸುವುದನ್ನು ತನ್ನ ಕೃತಿಯಲ್ಲಿ ಮರೆ ಮಾಚಿದ್ದಾರೆ. ಮತ್ತು ಅಧಿಕ ತೆರಿಗೆ ವಿರೋಧಿ ದಂಗೆ ಎದ್ದ ರೈತರನ್ನು ನಂಜನಗೂಡಿನ ದೇವಾಲಯ ಆವರಣದಲ್ಲಿ ಕೂಡಿ ಹಾಕಿ ೧೮೨೪ರಲ್ಲಿ ಕಗ್ಗೊಲೆ ಮಾಡಿದ ಪ್ರಸಂಗ ಕೈ ಬಿಟ್ಟಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಒಟ್ಟಾರೆಯಾಗಿ ಸಿ. ಹಯವದನರಾವ ರವರ ಕೃತಿಗಳಲ್ಲಿ ವೈಷ್ಣವ ಪಕ್ಷಪಾತಿಯಾಗಿದ್ದುದು ಕಂಡುಬರುತ್ತದೆ. ಹಾಗಾಗಿ ಇವರ ಕೃತಿಗಳು ವಿಮರ್ಶಕ್ಕೆ ಒಳಗಾಗಿವೆ.

**ಮರಣ:**

ಸಿ. ಹಯವದನರಾವ ರವರು ೧೯೪೬ರಲ್ಲಿ ಮರಣ ಹೊಂದಿದ್ದರು. ಇವರು ಕರ್ನಾಟಕ ಇತಿಹಾಸಕ್ಕೆ ಸಲ್ಲಿಸಿದ ಸೇವೆ ಮತ್ತು ಸಾಧನೆಗಳು ಇನ್ನೂ ಜೀವಂತವಾಗಿವೆ.

**ವ್ಯಕ್ತಿತ್ವ:**

ಇವರು ಪ್ರತಿಭಾವಂತರು ಮತ್ತು ಉತ್ತಮ ವ್ಯಕ್ತಿತ್ವವುಳ್ಳ ಒಬ್ಬ ಧೀಮಂತ ನಾಯಕ. ತನ್ನ ಬಹುಮುಖ ಪ್ರತಿಭೆಯಿಂದ ಇಡೀ ಮೈಸೂರು ಒಡೆಯರ ಕುರಿತು ಇತಿಹಾಸ ರಚನೆಯಲ್ಲಿ ತೋರಿದ ಆಸಕ್ತಿ, ಇವರು ವಹಿಸಿದ ಶ್ರಮ ಮೆಚ್ಚುವಂತಹದಾಗಿದೆ. ಇವರು ರಚಿಸಿದ ಕೃತಿಗೆ ಮೀರಿಸುವ ಕೃತಿ ಮತ್ತೊಂದು ರಚನೆಯಾಗಿಲ್ಲ. ಒಟ್ಟಾರೆಯಾಗಿ ಇವರು ಕರ್ನಾಟಕ ಚರಿತ್ರೆಗೆ ಸಲ್ಲಿಸಿದ ಸೇವೆ ಮತ್ತು ಸಾಧನೆ ಅಪಾರ ಗಣನೀಯವಾಗಿದೆ.

**

## ೫. ಎಸ್. ಕೃಷ್ಣ ಸ್ವಾಮಿ ಅಯ್ಯಂಗಾರ ಕ್ರಿ.ಶ.೧೮೭೧–೧೯೫೩

**ಪರಿಚಯ:**

ಬಹುಮುಖ ಪ್ರತಿಭೆಯುಳ್ಳ ಎಸ್.ಕೃಷ್ಣ ಸ್ವಾಮಿ ಅಯ್ಯಾಂಗರ ರವರು ದಕ್ಷಿಣ ಭಾರತ ಇತಿಹಾಸ ರಂಗದಲ್ಲಿ ಪ್ರಖ್ಯಾತ ಪಡೆದು, ನಂತರ ಕರ್ನಾಟಕ ಚರಿತ್ರೆಗೆ ಅಪಾರವಾದ ಸೇವೆ ಸಲ್ಲಿಸಿದ ಇವರು, ಕರ್ನಾಟಕ ಚರಿತ್ರೆಕಾರರಲ್ಲಿ ಒಬ್ಬರು. ಇವರು ಕರ್ನಾಟಕ ಚರಿತ್ರೆಗೆ ಸಲ್ಲಿಸಿದ ಸೇವೆ ಪ್ರಮುಖವಾದದ್ದು.

**ಜನನ:**

ಪ್ರತಿಭಾವಂತರಾದ ಎಸ್.ಕೃಷ್ಣ ಸ್ವಾಮಿ ಅಯ್ಯಾಂಗರ ರವರು ೧೯೭೧ರಲ್ಲಿ ಕುಂಬಕೋಣದ ಹತ್ತಿರವಿದ್ದ, ಸಕ್ಕೋಟಿ ಎಂಬಲ್ಲಿ ಜನಿಸಿದರು.

**ಶಿಕ್ಷಣ:**

"ಇವರು ತಮ್ಮ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಸಕ್ಕೋಟಿಯಲ್ಲಿ ಆರಂಭಿಸಿ, ನಂತರ ಬೆಂಗಳೂರಿನಲ್ಲಿ ಶಿಕ್ಷಣ ಪಡೆದರು. ಅವರಿಗೆ ಪದವಿ ಪೂರ್ವ ವರ್ಗದಲ್ಲಿ ಬೌದ್ಧಶಾಸ್ತ್ರ ಮತ್ತು ಸ್ನಾತಕೋತ್ತರ ವಿಭಾಗದಲ್ಲಿ ಗಣಿತಶಾಸ್ತ್ರ ಬಹು ಪ್ರೀಯವಾಗಿದ್ದು, ಕೊನೆಗೆ ಅವರು ಒಂದು ನೆಲೆಯೂರಿದ್ದು, ಇತಿಹಾಸ ಕ್ಷೇತ್ರದಲ್ಲಿ ಇವರು ಮೊಟ್ಟಮೊದಲು ಅವರ ಲೇಖನಿಯಿಂದ ಹೊರಬಂದಿದ್ದು, "ದಿ ಹಿಸ್ಟರಿ ಆಫ್ ಮೈಸೂರು ಅಂಡರ್ ದಿ ಒಡೆಯರ್ಸ್" ಎಂಬ ಪ್ರೌಢ ಪ್ರಬಂಧ ಹೊರಬಂದಿದೆ. ನಂತರ ಇವರು ಕರ್ನಾಟಕ ಚರಿತ್ರೆಕಾರರೆಂದು ಪ್ರಖ್ಯಾತ ಪಡೆದುಕೊಂಡರು."[೧೬]

"**ಕೃತಿಗಳು:–**

- ದಿ ಹಿಸ್ಟರಿ ಆಫ್ ಮೈಸೂರ ಅಂಡರ್ ದಿ ಒಡೆಯರ್ಸ್.
- ಸೋರ್ಸಸ್ ಆಫ್ ವಿಜಯನಗರ ಹಿಸ್ಟರಿ.
- ದಿ ಬಿಗ್ನಿಂಗ್ಸ್ ಆಫ್ ಸೌತ್ ಇಂಡಿಯನ್ ಹಿಸ್ಟರಿ (೧೯೧೮).
- ಕಾಂಟ್ರಿಬ್ಯೂಷನ್ಸ್ ಆಫ್ ಸೌತ್ ಇಂಡಿಯಾ ಟು ಇಂಡಿಯನ್ ಕಲ್ಚರ್.
- ಸೌತ್ ಇಂಡಿಯ ಆಂಡ್ ಹರ್ ಮೊಹ್ಯಾ ಮೇಡನ್ ಇನ್ ವೇಡರ್ಸ್.
- ಮಣಿ ಮೇಖಾಲೆ ಇನ್ ಇಟ್ಸ್ ಹಿಸ್ಟಾರಿಕಲ್ ಸೆಟಿಂಗ್ (೧೯೨೮).
- ದಿ ರೆವೊಲ್ಯೂಕ್ಷನ್ ಆಫ್ ಹಿಂದೂ ಅಡ್‌ಮಿನಿಸ್ಟ್ರೆಟಿವ್ ಇನ್‌ಸ್ಟಿಟ್ಯೂಷನ್ ಇನ್ ಸೌತ್ ಇಂಡಿಯಾ.
- ಹಿಸ್ಟರಿ ಆಫ್ ತಿರುಪತಿ.
- ಹಿಸ್ಟಿರಿಕಲ್ ಇನ್‌ಸ್ಕ್ರಿಪ್ಷನ್ಸ್ ಆಫ್ ಸೌತ್ ಇಂಡಿಯಾ.
- ಜನರಲ್ ಆಫ್ ಇಂಡಿಯನ್ ಹಿಸ್ಟರಿ"[೧೭]

ಹೀಗೆ ಅವರು ಇತಿಹಾಸ ಕ್ಷೇತ್ರಕ್ಕೆ ಬಂದು ಹತ್ತು ಹಲವಾರು ಕೃತಿಗಳನ್ನು ರಚಿಸಿದ್ದರು. ಅವುಗಳಲ್ಲಿ ಪ್ರಮುಖವಾಗಿ ಕರ್ನಾಟಕ ಚರಿತ್ರೆಗೆ ಸಂಬಂಧಿಸಿದಂತೆ, ಮೈಸೂರು ಒಡೆಯರ ನಂತರ ವಿಜಯನರ ಸಾಮ್ರಾಜ್ಯದ ಬಗ್ಗೆ ಗ್ರಂಥಗಳಲ್ಲಿ ಬರೆದಿದ್ದಾರೆ.

**ಎಸ್. ಕೃಷ್ಣ ಸ್ವಾಮಿ ಅಯ್ಯಂಗಾರವರ ಸಾಧನೆ:**

"ಇವರು ಪ್ರಖ್ಯಾತ ಶಾಸನ ತಜ್ಞರಾಗಿದ್ದು, ಇವರು ಹಾಲ್ಟ್‌ಜ್ ಹಾಗೂ ವೆಂಕಯ್ಯನವರ ಪರಿಚಯದಿಂದ ಇತಿಹಾಸಕಾರರಾಗಿದ್ದು, ಅವರ ಜೀವನದಲ್ಲಿ ಒಂದು ಮಹತ್ತರ ತಿರುವು ಉಂಟಾಯಿತು. ಅವರು ೧೯೦೧ರ ಹೊತ್ತಿಗೆ ಚೋಳರ ಚರಿತ್ರೆಯಲ್ಲಿ ಆಸಕ್ತಿವಹಿಸಿ ಸಂಶೋಧನೆಯನ್ನು ಆರಂಭಿಸಿದ್ದರು. ಮತ್ತು ಅನೇಕ ರಾಜರು ವಿಜಯನಗರ ಆಳಿದ ಸಂತತಿಗಳನ್ನು ಬೆಳಕಿಗೆ ತರುವುದು, ಅವುಗಳ ಕಾಲವನ್ನು ಸರಿಪಡಿಸಿ ನಿರ್ಧಿಷ್ಟವಾಗಿ ನಿರ್ಧರಿಸುವುದು. ಆಳಿ ಅಳಿದು ಹೋದ ರಾಜರ ವಂಶಾವಳಿಗಳನ್ನು ಸ್ಪಷ್ಟವಾಗಿ ಸೂಚಿಸುವುದು ಮತ್ತು ಆಳಿದ ಸಂತತಿಗಳ ಕಾಲ್ಪನಿಕ ಮೂಲದ ಮೇಲೆ ಬೆಳಕನ್ನು ಬಿರುವುದು. ಮುಂತಾದ ಅನೇಕ ಸಮಸ್ಯೆ ಹಾಗೂ ಒಗ್ಗಟನ್ನು ಬಿಡಿಸುವ ಕಾರ್ಯದಲ್ಲಿ ಇವರು ತಲ್ಲೀನರಾದರು. ಅವರು ಮೊದಲಿನಿಂದಲು ತಮಿಳು ಭಾಷೆಯಲ್ಲಿ ಪಾಂಡಿತ್ಯ ಪೂರ್ಣ ಐತಿಹಾಸಿಕ ಲೇಖನಗಳನ್ನು ಬರೆಯುತ್ತಿದ್ದರು. ೧೯೧೪ರಲ್ಲಿ ಮದ್ರಾಸ್ ವಿಶ್ವವಿದ್ಯಾಲದಲ್ಲಿ ಇವರು ಇತಿಹಾಸದ ಪ್ರಾಧ್ಯಾಪಕ ಪೀಠವನ್ನು ಸ್ಥಾಪಿಸಿದ್ದಾಗ, ಅದನ್ನು ಅಲಂಕರಿಸಿದ ಪ್ರಥಮ ಮಹಾಪಂಡಿತ ಎಸ್.ಕೃಷ್ಣ ಸ್ವಾಮಿ ಅಯ್ಯಂಗರ ಅವರಿಗೆ ಸಂಗಮ ಕಾಲದ ಅಧ್ಯಯನದಲ್ಲಿ ಗಾಢಾನುರಕ್ತಿ ಹಾಗೂ ಅತ್ಯಂತ ಆಸಕ್ತಿ ಇದ್ದಿತ್ತು. ಆಗ ಅವರು ಕೇಂಬ್ರಿಡ್ಜ್ ಹಿಸ್ಟರಿ ಆಫ್ ಇಂಡಿಯಾದ ಮೂರನೆ ಸಂಪುಟದಲ್ಲಿ ದಕ್ಷಿಣ ಭಾರತದ ಇತಿಹಾಸ ಕುರಿತು ಅಧ್ಯಯನಗಳನ್ನು ಬರೆದರು. ಹಾಗೂ ಇವರು ಸ್ವಲ್ಪ ಕಾಲ "ಜನರಲ್ ಆಫ್ ಇಂಡಿಯನ್ ಹಿಸ್ಟರಿ" ಎಂಬ ನಿಯತಕಾಲಿಕದ ಸಂಪಾದಕರಾಗಿ ಸೇವೆ ಸಲ್ಲಿಸಿದ್ದರು. ನಂತರ ಅವರು ೧೯೨೯ ನವೆಂಬರ ೧೧ ರಂದು ನಿವೃತ್ತರಾದರು. ನಂತರ ಅವರು ಮದ್ರಾಸಿನಲ್ಲಿ ಇತಿಹಾಸ ಅಧ್ಯಯನಗಳಿಗೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದರು. ಸತ್ಯಾನಾಥ ಅಯ್ಯಾರ, ಗೋಪಾಲ ನಾರಾಯಣ ಅಯ್ಯಾರ, ಅಪ್ಪಾದೊರೈ ಮುಂತಾದ ಘನ ವಿದ್ವಾಂಸರಿಗೆ ಇವರು ಸ್ಪೂರ್ತಿದಾಯಕರಾಗಿದ್ದರು. ಹೀಗೆ ರಾಜಕೀಯ ಇತಿಹಾಸದಲ್ಲಿ ಆಸಕ್ತಿವಹಿಸಿದ ಒಂದು ವಿಚಾರ ಪಂಥ ಬೆಳೆಯುವದಕ್ಕೆ ಕಾರಣರಾದರ"[೧೮]

ಇವರು ಮೈಸೂರು ಒಡೆಯರ ಕುರಿತು ಒಂದು ಗ್ರಂಥ ರಚನೆ ಮಾಡಿ, ಅವರ ಕಾಲದ ಆಡಳಿತ ವ್ಯವಸ್ಥೆಗಳ ಕುರಿತು ಸಂಶೋಧನೆ ಮಾಡಿ, ನಂತರ ವಿಜಯನಗರ ಸಾಮ್ರಾಜ್ಯದ ಮೂಲಾಧಾರಗಳ ಕುರಿತು ಅವರು ತಮ್ಮ ಗ್ರಂಥದಲ್ಲಿ

ಸಂಕ್ಷೀಪ್ತವಾಗಿ ಅಳವಡಿಸಿ ರಚಿಸಿದ್ದಾರೆ. ಆದರೂ ಭಾರತದ ಬಗ್ಗೆ ಯೂರೋಪಿಯನ್ನರು ಮುಖ್ಯವಾಗಿ ಪಾದ್ರಿಗಳು ಮಾಡಿದ ಏಕಪಕ್ಷೀಯ ಟೀಕೆಗಳಿಗೆ ಅವರಾಗಲಿ, ಅವರ ಸಹೋದ್ಯೋಗಿಗಳಾಗಲಿ ಪ್ರತಿಭಟಿಸದೆ ಮೌನವಾಗಿದ್ದುದು ಆಶ್ಚರ್ಯಕರ ವಿಷಯವಾಗಿದೆ. ಅವರು ದಕ್ಷಿಣ ಭಾರತದಲ್ಲಿ ಸಂಶೋಧನೆ ನಡೆಸಿದ ಮತ್ತು ಇಲ್ಲಿಯ ಸಂಸ್ಕೃತಿ ಎಷ್ಟು ಸಂಪತ್ತ ಸಮೃದ್ಧಿ, ವೈವಿದ್ಯಮಯ ಆಗಿತ್ತೆಂಬುದನ್ನು ತೋರುವದಕ್ಕಾಗಿ ವಿಭಿನ್ನ ವಿಷಯಗಳನ್ನು ಕುರಿತು ವಿಚಾರ ಮಾಡಿ, ಒಂದು ನೂತನ ಬಗೆಯ ಐತಿಹಾಸಿಕ ಸಂಶೋಧನಾ ಪಂಥವನ್ನು ಉದ್ಘಾಟಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಒಟ್ಟಿನಲ್ಲಿ ಇವರು ದಕ್ಷಿಣ ಭಾರತ ಮತ್ತು ಕರ್ನಾಟಕದ ಚರಿತ್ರೆಕಾರರು ಮತ್ತು ಮಹಾನ್ ಸಂಶೋಧಕರಾಗಿದ್ದರು.

**ಮರಣ:**

ಪ್ರತಿಭಾವಂತರಾದ ಎಸ್.ಕೃಷ್ಣ ಸ್ವಾಮಿ ಅಯ್ಯಂಗಾರವರು ೧೯೫೩ರಲ್ಲಿ ನಮ್ಮಿಂದ ಅಗಲಿದರು. ಇವರು ಅಗಲಿದರೂ ಕೂಡಾ ಇವರು ಮಾಡಿದ ಸಾಧನೆಗಳು ಎಂದಿಗೂ ಮರೆಯಲು ಸಾಧ್ಯವಿಲ್ಲ.

**ವ್ಯಕ್ತಿತ್ವ:**

ಪ್ರತಿಭಾವಂತರಾದ ಎಸ್.ಕೃಷ್ಣ ಸ್ವಾಮಿ ಅಯ್ಯಂಗಾರವರು ಸರಳ ಸ್ವಭಾವದವರಾಗಿದ್ದು, ಇವರು ಮೊದಲು ಭೌತಶಾಸ್ತ್ರದಲ್ಲಿ ಆಸಕ್ತಿ ಹೊಂದಿ, ನಂತರ ಇತಿಹಾಸ ಕಡೆ ಗಮನಹರಿಸಿ ದಕ್ಷಿಣ ಭಾರತ ಇತಿಹಾಸಕಾರರೆಂದು ಹಾಗೂ ಕರ್ನಾಟಕ ಚರಿತ್ರೆಯ ಇತಿಹಾಸಕಾರರಾಗಿ ಪ್ರಖ್ಯಾತಿ ಪಡೆದು, ಕೊನೆಗೆ ಇವರು ಕರ್ನಾಟಕ ಇತಿಹಾಸದಲ್ಲಿ ಮಾಡಿದ ಸಾಧನೆ ಹಾಗೂ ಸಲ್ಲಿಸಿದ ಸೇವೆ ಎಂದಿಗೂ ಮರೆಯುಂತಿಲ್ಲ.

**

## ೬. ಡಾ|| ಎಂ.ಹೆಚ್. ಕೃಷ್ಣ ಕ್ರಿಶ.೧೮೯೨-೧೯೪೭

**ಪರಿಚಯ:**



ಡಾ|| ಎಂ.ಹೆಚ್. ಕೃಷ್ಣ

ಪ್ರಸಿದ್ಧ ಪುರಾತತ್ವ ತಜ್ಞರು, ಮೈಸೂರು ರಾಜ್ಯದ ಪ್ರಾಚೀನ ಶಾಸ್ತ್ರ ಇಲಾಖೆಯ ನಿರ್ದೇಶಕರು ಮತ್ತು ಮೈಸೂರು ವಿಶ್ವವಿದ್ಯಾಲಯ ಇತಿಹಾಸದ ಪ್ರಾಧ್ಯಾಪಕರೂ ಆಗಿದ್ದ ಮಹಾನ್ ಸಾಹಿತ್ಯಾಕಾರರಲ್ಲಿ ಇವರೊಬ್ಬರು. ಬ್ರಿಟೀಷ್ ಮ್ಯುಸಿಯಮ್ಮಿನಲ್ಲಿ ಪ್ರಾಚಾಶಾಸ್ತ್ರದಲ್ಲಿ ವಿಶೇಷ ಅಧ್ಯಯನ ನಡೆಸಿದ್ದರು. ನಂತರ ಈಜಿಪ್ಟ್‌ಗೆ ಹೋಗಿ ಅಲ್ಲಿ ಉನ್ನತ ತರಬೇತಿ ಪಡೆದು, ಧೀಮಂತ ನಾಯಕರಾಗಿ ಕರ್ನಾಟಕ ಜನತೆಯ ನೆನಪಿನಲ್ಲಿ ಶಾಸ್ವತ ಉಳಿದುಕೊಂಡಿದ್ದಾರೆ.

**ಜನನ:**

ಮೈಸೂರು ಹಟ್ಟಿ ಕೃಷ್ಣ ಅಯ್ಯಾಂಗರವರು ೧೮೯೨ರ ಅಗಸ್ಟ ೧೯ರಂದು ಮೈಸೂರಿನಲ್ಲಿ ಜನ್ಮತಾಳಿದರು. ಇವರ ತಂದೆ ಹಟ್ಟಿ ರಂಗೈಯ್ಯಾಂಗರ, ತಾಯಿ ಲಕ್ಷ್ಮಮ್ಮ.

**ಶಿಕ್ಷಣ:**

"ಎಂ.ಹೆಚ್. ಕೃಷ್ಣರವರು ತಮ್ಮ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಮೈಸೂರಿನಲ್ಲಿ ಪಡೆದು, ಮಹಾರಾಜ ಕಾಲೇಜಿನಲ್ಲಿ ಬಿ.ಎ. ಪದವಿಯನ್ನು ಪಡೆದರು. ಈ ಸಮಯದಲ್ಲಿ ಇತಿಹಾಸದ ಪ್ರಾಚೀನ ಸಂಶೋಧನಾಶಾಸ್ತ್ರ ಹಾಗೂ ಇತರ ಸಂಬಂಧಿತ ಅಧ್ಯಯನಗಳಲ್ಲಿ ಆಸಕ್ತಿ ಬೆಳೆಸಿಕೊಂಡಿದ್ದರು. ೧೯೧೭ರಲ್ಲಿ ಮದ್ರಾಸ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಪದವಿ ಪಡೆದರು. ಇವರ ಪ್ರತಿಭೆಯನ್ನು ಅರಿತ ಅಂದಿನ ಮೈಸೂರು ವಿಶ್ವವಿದ್ಯಾಲಯದ ಉಪ-ಕುಲಪತಿಗಳಾದ ಬ್ರಜೇಂದ್ರನಾಥ್ ಸೀಲ್‌ರವರು ಇವರನ್ನು ಉನ್ನತ ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಕಳುಹಿಸಿದ್ದರು. ದಖ್ಖನ ನ್ಯೂಮೀಸ್, ಮ್ಯಾಟಿಕ್ಸ್ ಪ್ರಬಂಧಕ್ಕೆ ಲಂಡನ್ ವಿಶ್ವವಿದ್ಯಾನಿಲಯ ಡಾಕ್ಟರ್ ಆಫ್ ಲಿಟರೇಚರ್ ಪದವಿಯನ್ನು ನೀಡಿತ್ತು. ೧೯೩೨ರಲ್ಲಿ ಮೈಸೂರಿನ ಇತಿಹಾಸ ಇಲಾಖೆ ಮುಖ್ಯಸ್ಥರು ಮತ್ತು ೧೯೩೯ರಲ್ಲಿ ಕಲಾ ವಿಭಾಗದ ಮುಖ್ಯಸ್ಥರಾದರು"[೧೯]

**"ಕೃತಿಗಳು:**

- "ಕರ್ನಾಟಕ ಮಾನ್ಯುಮೆಂಟ್ಸ್" (೩ ಸಂಪುಟಗಳು)
- "ಮಾನೊಗ್ರಾಫ್ಸ್ ಆಫ್ ಚಾಲುಕ್ಯ ಹೊಯ್ಸಳ ಆರ್ಕಿಟೆಕ್ಚರ್"
- "ದಿ ಹಿಸ್ಟೊರಿ ಆಫ್ ಎನ್ಸೆಂಟ್ ಇಂಡಿಯಾ"[೨೦]

**ಕೃಷ್ಣರವರ ಪ್ರಮುಖ ವಿಚಾರ ಧಾರೆಗಳು:**

ಇವರು ತಮ್ಮ ಭಾಷಣ ಹಾಗೂ ಬರಹಗಳ ಮೂಲಕ ಭಾರತದ ಇತಿಹಾಸವನ್ನು ಜನಪ್ರೀಯಗೋಳಿಸಿದ್ದರು. "ಭಾರತದ ಜನರೆ ಭಾರತದ ಚರಿತ್ರೆಯನ್ನು ಬರೆಯಬೇಕು" ಎಂಬುವುದು ಇವರ ಮನೋಧೋರಣೆ ಯಾಗಿತ್ತು. ಕಿರಿಯ ಲೇಖಕರಿಗೆ ಇತಿಹಾಸದ ಬಗ್ಗೆ ಬರೆಯಲು ಪ್ರೋತ್ಸಾಹ ಮತ್ತು ಮಾರ್ಗದರ್ಶನ ನೀಡುತ್ತಿದ್ದರು.

**ಎಂ.ಹೆಚ್. ಕೃಷ್ಣರವರು ಕರ್ನಾಟಕ ಇತಿಹಾಸಕ್ಕೆ ನೀಡಿದ ಕೊಡುಗೆಗಳು:**

"ಇವರು ಭೂ ಶೋಧನೆಯಲ್ಲಿ ಅತ್ಯಾಸಕ್ತಿ ವಹಿಸಿ ಮಣ್ಣಿನಲ್ಲಿನ ಹಲವಾರು ಅವಶೇಷಗಳನ್ನು ಬೆಳಕಿಗೆ ತಂದರು. ಮೈಸೂರು ರಾಜ್ಯದಲ್ಲಿ ಮುಖ್ಯವಾಗಿ ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿ ಹಾಗೂ ಬ್ರಹ್ಮಗಿರಿಯಲ್ಲಿ ಭೂ ಶೋಧನಾ ಕಾರ್ಯಗಳನ್ನು ಕೈಗೊಂಡರು. ಹಾಗೂ ಹಾಸನ ಜಿಲ್ಲೆಯ ಹಲ್ಮಿಡಿ, ಬೆಲೂರು, ಹಳೆಬೀಡು, ಶ್ರವಣ ಬೆಳಗೊಳ, ಮಂಡ್ಯ, ಶ್ರೀರಂಗಪಟ್ಟಣ, ಮೈಸೂರು ಜಿಲ್ಲೆಯ ತಲಕಾಡು, ಬೆಂಗಳೂರು ಜಿಲ್ಲೆಯ ನಂದಿದುರ್ಗಗಳಲ್ಲಿ ಸಂಶೋಧನೆ ಮತ್ತು ಅಧ್ಯಯನ ನಡೆಸಿ, ಸಂಶೋಧನಾ ಲೇಖನ ಪ್ರಕಟಿಸಿದ್ದರು. ಸುಮಾರು ೨೦೦ ಶಾಸನಗಳನ್ನು ಪ್ರಕಟಿಸಿದ್ದರು. ಇವರು ವಾಸ್ತುಕಲೆ ಮತ್ತು ಶಿಲ್ಪಕಲೆಗಳನ್ನು ಕುರಿತಂತೆ ಇವರು ನಡೆಸಿದ ಸಂಶೋಧನೆಗಳನ್ನು ನೂರಾರುಗಳಾಗಿವೆ. ಅವುಗಳಲ್ಲಿ ಅನೇಕ ದೇವಾಲಯ, ಶಿಲ್ಪಿಗಳ ವಿವರವಾಗಿ ಅಭ್ಯಾಸ ನಡೆಸಿ ಅವುಗಳನ್ನು ವಾರ್ಷಿಕ ವರದಿಯಲ್ಲಿ ಪ್ರಕಟಿಸಿದ್ದರು. ಇವುಗಳಲ್ಲದೆ ದಕ್ಷಿಣ ಭಾರತದ ಅನೇಕ ರಾಜ ಮನೆತನಗಳು ಹಾಕಿಸಿದ ನಾಣ್ಯಗಳ ವಿವರಣೆಯನ್ನು ಕೊಟ್ಟರು. ೧೯೨೯ರಿಂದ ೧೯೪೫ರ ವರೆಗಿನ ಪ್ರಾಚ್ಯ ಸಂಶೋಧನಾ ಇಲಾಖೆಯ ವಾರ್ಷಿಕ ವರದಿಗಳಲ್ಲಿ ನಾಣ್ಯಗಳನ್ನು ಕುರಿತು ಪಾಂಡಿತ್ಯ ಪೂರ್ಣ ಲೇಖನ ಪ್ರಕಟಿಸಿದ್ದಾರೆ"[೨೧]

ಇವರ ಇತರ ಕೃತಿಗಳಾದ ಅಜಂತಾ, ಎಲ್ಲೋರಾ ಇವರ ಸಂಶೋಧನೆಯ ಕೈಪಿಡಿಗಳಾಗಿವೆ. ಹಿಂದು ದೇಶದ ಚರಿತ್ರೆಸಾರ, ಕನ್ನಡ ನಾಡಿನ ಚರಿತ್ರೆ, ಮೈಸೂರು ಮತ್ತು ಹಾಸನ ಜಿಲ್ಲೆಗಳ ಎಪಿಗ್ರಾಫಿಯ, ಕರ್ನಾಟಕ ಸಂಪುಟಗಳು ಇತ್ಯಾದಿಗಳನ್ನು ಸಂಶೋಧನೆ ಮಾಡಿದ್ದರು. ಜೊತೆಗೆ ಇವರು ೧೯೩೪ರಲ್ಲಿ ಮೈಸೂರಿನಲ್ಲಿ ನಡೆದ ಪ್ರಾಚ್ಯ ಸಮ್ಮೇಳನದ ಕಾರ್ಯದರ್ಶಿಯಾಗಿ, ೧೯೪೭ರಲ್ಲಿ ಇಂಡಿಯನ್ ಸೈನ್ಸ್ ಕಾಂಗ್ರೇಸ್‌ನ ಮಾನವಶಾಸ್ತ್ರ ವಿಭಾಗದ ಅಧ್ಯಕ್ಷರಾಗಿದ್ದರು. ಇವರು ೧೯೩೮ರಲ್ಲಿ ಕರ್ನಾಟಕ ನಕ್ಷೆ ಸಿದ್ಧಪಡಿಸಿದರು. ನಂತರ ಕರ್ನಾಟಕ ಕಲೆಗಳ; ಇತಿಹಾಸ ಮತ್ತು ಅಜಂತ ಎಲ್ಲೋರಾವನ್ನು ಕುರಿತು ಪುಸ್ತಕಗಳು, ಭಾರತದ ಕಲಾ ಇತಿಹಾಸಕ್ಕೆ ಅವರು ನೀಡಿದ ಕೊಡುಗೆ ಬೆಲೆಬಾಳುವ ಕಾಣಿಕೆಗಳಾಗಿವೆ. ಇವರು ತಮ್ಮ ವಿಶೇಷ ಬುದ್ಧಿವಂತಿಕೆ ಹೊಂದಿ ಮೈಸೂರು ಸಂಸ್ಥಾನದ ಪ್ರಾಚ್ಯವಸ್ತು ಇಲಾಖೆಯು ದೇಶ

ವಿದೇಶಗಳಲ್ಲಿ ಹೆಮ್ಮೆಯಿಂದ ಮರೆಯುವಂತೆ ಮಾಡಿದ ಕರ್ನಾಟಕ ಇತಿಹಾಸದ ಸ್ಮರಣೀಯರಲ್ಲಿ ಎಂ.ಹೆಚ್. ಕೃಷ್ಣ ಒಬ್ಬರು.

**ಉತ್ಖನನಗಳು:**

"ಎಂ.ಹೆಚ್. ಕೃಷ್ಣ ರವರು ಲಂಡನಿನಲ್ಲಿ ಪ್ರೊ॥ ಇ.ಎ. ಗಾರ್ಡ್ನರರ ಮಾರ್ಗದರ್ಶನದಲ್ಲಿ ಶಾಸನಶಾಸ್ತ್ರ, ವಾಸ್ತುಶಿಲ್ಪ ಶಾಸ್ತ್ರ, ಮೂರ್ತಿ ಶಿಲ್ಪ, ನಾಣ್ಯ ಶಾಸ್ತ್ರ, ಮಾನವ ಶಾಸ್ತ್ರ, ಉತ್ಖನನ ಶಾಸ್ತ್ರ, ಸಂಸ್ಕೃತ, ಇತಿಹಾಸ ಮತ್ತು ಸಮಾಜಶಾಸ್ತ್ರ ಮೊದಲಾದ ವಿಷಯಗಳನ್ನು ಅಭ್ಯಾಸ ಮಾಡಿ ತರಬೇತಿ ಹೊಂದಿದ್ದರು. ಬ್ರಿಟಿಷ್ ಪ್ರಾಧ್ಯಾಪಕರಾದ ಸರ್ ಫ್ಲಿಂಡರ್ಸ್ ಪೀಟ್ರಿಯವರು ಆಗ ನಡೆಸುತಿದ್ದ ಉತ್ಖನನಗಳಲ್ಲಿ ಕೃಷ್ಣರು ಭಾಗವಹಿಸಿದ್ದರು. ಭಾರತದ ಇತಿಹಾಸ ಮತ್ತು ಪ್ರಾಚ್ಯವಸ್ತು ಶಾಸ್ತ್ರಗಳಲ್ಲಿ ಸಂಶೋಧನೆ ಮಾಡುತ್ತ, 'ಡಕ್ಕನ್ ನ್ಯೂಮಿಸ್ಮಾಟಿಕ್ಸ್' ಎಂಬ ಕೃತಿ ರಚಿಸಿ ಕೃಷ್ಣರು ಲಂಡನ್ ವಿಶ್ವವಿದ್ಯಾಲಯದ 'ಡಾಕ್ಟರ್ ಆಫ್ ಲಿಟರೇಚರ್' ಎಂಬ ಪದವಿ ಪಡೆದರು. ಆದರ್ಶ ಶಿಕ್ಷಕರಾಗಿದ್ದ ಕೃಷ್ಣರು ವಾರದಲ್ಲಿ ಆರು ದಿನ ಮೈಸೂರು ಮಹಾರಾಜ ಕಾಲೇಜಿನಲ್ಲಿ ಮುಂಜಾನೆ ೧೧.೦೦ ರಿಂದ ೧.೦೦ ಗಂಟೆಯ ವರೆಗೆ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ, ಅನಂತರ ಪ್ರಾಚ್ಯವಸ್ತು ಇಲಾಖೆಯ ಕೆಲಸವನ್ನು ನೋಡಿಕೊಳ್ಳುತ್ತಿದ್ದರು. ವಾರಾಂತ್ಯದಲ್ಲಿ ಸಮೀಪದ ಸ್ಥಳಗಳಿಗೆ ಹೋಗಿ ಅಲ್ಲಿಯ ಅವಶೇಷಗಳನ್ನು ಅಭ್ಯಾಸಿಸುತ್ತಿದ್ದರು. ಮತ್ತು ದೀರ್ಘಾವಧಿಯ ರಜಾ ಕಾಲದಲ್ಲಿ ಭೂ ಉತ್ಖನನಗಳನ್ನು ನಡೆಸುತ್ತಿದ್ದರು. ೧೯೨೮ರಲ್ಲಿ ಚಂದ್ರವಳ್ಳಿಯ ಕಣಿವೆಯಲ್ಲಿ ಆ ಊರಿನ ಸಂಸ್ಕೃತಿ ಮತ್ತು ಮಹತ್ವವನ್ನು ಕಂಡುಹಿಡಿಯಲು ಉತ್ಖನನ ಮಾಡಿದ್ದರು. ಮತ್ತು ಶಾಸ್ತ್ರೀಯ ರೀತಿಯಲ್ಲಿ ನಡೆದ ಈ ಉತ್ಖನನದ ತರುವಾಯ ಬ್ರಹ್ಮಗೀರಿಯಲ್ಲಿ ಉತ್ಖನನ ನಡೆಸಿ, ಅಶೋಕನ ಕಾಲದ "ಇಸಿಲಾ" ಪಟ್ಟಣ ಆ ಊರೆ ಆಗಿತೆಂದು ಅಭಿಪ್ರಾಯಪಟ್ಟರು".[೨೨]

**ಮರಣ:**

ಎಂ.ಹೆಚ್. ಕೃಷ್ಣರವರು ೧೯೪೭ರ ಡಿಸೆಂಬರ ೨೩ರಂದು ಹೃದಯಘಾತದಿಂದ ನಿಧನರಾದರು. ಇವರ ನಿಧನದಿಂದ ಕರ್ನಾಟಕ ಇತಿಹಾಸಕ್ಕೆ ತುಂಬಲಾರದ ನಷ್ಟವಾಯಿತು.

**ವ್ಯಕ್ತಿತ್ವ:**

ಉತ್ತಮ ವಾಗ್ಮಿಗಳು, ಸೌಜನ್ಯ ಶೀಲರು, ಉತ್ಸಾಹಿಗಳು ಆಗಿದ್ದ ಎಂ.ಹೆಚ್. ಕೃಷ್ಣರಿಗೆ ಕನ್ನಡ ನಾಡು-ನುಡಿಯ ಬಗೆಗೆ ಅಪಾರ ಪ್ರೇಮ ಮತ್ತು ಅಭಿಮಾನವಿತ್ತು. ಇತಿಹಾಸ ಮತ್ತು ಪ್ರಾಚ್ಯವಸ್ತು ಶಾಸ್ತ್ರಗಳ ಮೇಲೆ ಗಾಢವಾದ ಪ್ರೇಮವಿದ್ದ ಕೃಷ್ಣರಿಗೆ ತಮ್ಮ ಕೆಲಸದ ಬಗ್ಗೆ ತುಂಬ ಆಸಕ್ತಿ ಇತ್ತು. ಇವರ ಸಮಕಾಲಿನರಾದ ಡಾ॥ ಎಸ್.ಕೃಷ್ಣ ಸ್ವಾಮಿ ಅಯ್ಯಾಂಗಾರ್, ಕೆ.ಎ. ನೀಲಕಂಠ ಶಾಸ್ತ್ರಿ ಮುಂತಾದ ಇತಿಹಾಸ ತಜ್ಞರಂತೆ ದಕ್ಷಿಣ ಭಾರತದ ಇತಿಹಾಸವನ್ನು ಕುರಿತು ಅಧಿಕಾರ ವಾಣಿಯಿಂದ

ಹೇಳಬಲ್ಲವರಾಗಿದ್ದ, ಕೃಷ್ಣರ ವಿಷಯವಾಗಿ ಕೆ.ಜಿ. ನಾಗರಾಜರವರು ಉನ್ನತ ಮಟ್ಟದ ಬಹುಮುಖ ಪಾಂಡಿತ್ಯ, ಖಚಿತ ಜ್ಞಾನ, ಸುಲಭ ಶೈಲಿ, ಉತ್ಸಾಹ ಮತ್ತು ಸೌಜನ್ಯಗಳಿಂದ ಕೃಷ್ಣರು ಆದರ್ಶಪ್ರಾಯರು.

ಇವರು ಕರ್ನಾಟಕ ಚರಿತ್ರೆಗೆ ಸಲ್ಲಿಸಿದ ಸೇವೆ ಅಪಾರ ಮಹತ್ವದ್ದಾಗಿದೆ. ಇವರ ಸಾಧನೆಯು ಕನ್ನಡ ನಾಡಿನ ಜನರು ಅವರು ತೋರಿದ ಪ್ರೀತಿ ಎಂದಿಗೂ ಮರೆಯುವಂತಿಲ್ಲ..

**

## ೭. ಕೆ.ಎ. ನೀಲಕಂಠ ಶಾಸ್ತ್ರಿ ಕ್ರಿಶ.೧೮೯೨-೧೯೭೫

**ಪರಿಚಯ:**


**ಕೆ.ಎ. ನೀಲಕಂಠ ಶಾಸ್ತ್ರಿ**

"ಕೆ.ಎ. ನೀಲಕಂಠ ಶಾಸ್ತ್ರಿಯವರು ದಕ್ಷಿಣ ಭಾರತದ ಮತ್ತು ಕರ್ನಾಟಕ ಚರಿತ್ರೆಯ ಅತಿ ಉತ್ತಮ ಹಾಗೂ ಅತಿ ಪ್ರಖ್ಯಾತವಾದ ಇತಿಹಾಸಕಾರರಾಗಿದ್ದರು. ಇವರು ದಕ್ಷಿಣ ಭಾರತದ ಇತಿಹಾಸವನ್ನು ರಚಿಸಿದಂತಹ ಮಹಾನ್ ದಾರ್ಶನಿಕ ಮತ್ತು ಇತಿಹಾಸಕ್ಕೆ ಒಂದು ಹೊಸ ಮೆರಗನ್ನು ತಂದುಕೊಟ್ಟಂತಹ ಇತಿಹಾಸಕಾರರಾಗಿದ್ದಾರೆ. ಇವರು ಇತಿಹಾಸ ಮತ್ತು ಸಂಶೋಧನೆಯ ಬಗ್ಗೆ ಸಂಬಂಧವನ್ನು ತಿಳಿಸಿದ್ದಾರೆ. ಅದೇ ರೀತಿಯಾಗಿ ಸಮಾಜವನ್ನು ನವೀಕರಣವನ್ನಾಗಿ ಮಾಡಿದ ಇವರು ಆಧುನಿಕ, ಇತಿಹಾಸ, ಲೇಖನ, ಕಲೆಗೆ ವಿಶೇಷ ಕೊಡುಗೆಯನ್ನು ನೀಡಿದ ಮಹಾನ್ ಲೇಖಕರಾಗಿದ್ದಾರೆ. ಹಾಗೂ ಇವರು ೧೬ನೇ ಶತಮಾನದಲ್ಲಿ ಸಂಭವಿಸಿದ ವಿಜಯನಗರ ಸಾಮ್ರಾಜ್ಯದ ಪತನದವರೆಗೆ ದಕ್ಷಿಣ ಭಾರತ ಸುದೀರ್ಘ ಇತಿಹಾಸವನ್ನು ಬರೆದ ಮಹಾನ್ ಇತಿಹಾಸಕಾರರಾಗಿದ್ದರು"[೨೩]

**ಜನನ:**

ಕೆ.ಎ. ನೀಲಕಂಠ ಶಾಸ್ತ್ರಿಯವರು ಕ್ರಿ.ಶ. ೧೮೯೨ರಲ್ಲಿ ತಮಿಳು ನಾಡಿನ ತಿರುನಲ್‌ವೆಲಿಯಲ್ಲಿ ಜನಿಸಿದ್ದರು. ಇವರು ಇತಿಹಾಸ ಕ್ಷೇತ್ರದಲ್ಲಿ ಗಣನೀಯವಾದ ಸಾಧನೆ ಮಾಡಿ ಪ್ರಮುಖ ದಕ್ಷಿಣ ಭಾರತ ಇತಿಹಾಸಕಾರರಾಗಿದ್ದರು.

**ಶಿಕ್ಷಣ:**

ಕೆ.ಎ. ನೀಲಕಂಠ ಶಾಸ್ತ್ರಿಯವರು ತಮ್ಮ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ತಿರುನೆಲೆಯಲ್ಲಿ ಆರಂಭಿಸಿ, ನಂತರ ಮದ್ರಾಸ ವಿಶ್ವವಿದ್ಯಾಲಯದಲ್ಲಿ ಇತಿಹಾಸದ ವಿಭಾಗದಲ್ಲಿ ಸ್ನಾತಕೋತರ ಉನ್ನತ ಪದವಿಯನ್ನು ಪಡೆದರು. ಇವರು ಸಂಸ್ಕೃತ, ಡಚ್, ಫ್ರೇಂಚ್ ಮತ್ತು ಇಂಗ್ಲೀಷ್ ಭಾಷೆಯನ್ನು ಕಲಿತು ಬೃಹತ್ ಭಾರತದ ಇತಿಹಾಸ ರಚನೆಯಲ್ಲಿ ಆ ಭಾಷೆಗಳ ಪ್ರಯೋಜನ ಪಡೆದುಕೊಂಡರು.

**ಕೆ.ಎ. ನೀಲಕಂಠ ಶಾಸ್ತ್ರಿಯವರ ಸೇವೆ:-**

"ಕೆ.ಎ. ನೀಲಕಂಠ ಶಾಸ್ತ್ರಿಯವರು ಚಿದಂಬರ ಶ್ರೀ ಮೀನಾಕ್ಷಿ ಕಾಲೇಜಿನ ಪ್ರಾಂಶುಪಾಲರಾಗುವದಕ್ಕೂ ಮೊದಲು ತಿರುವೆಲ್‌ವೇಲಿ ಮತ್ತು ಕಾಶಿಯಲ್ಲಿ ಇತಿಹಾಸ ಅಧ್ಯಾಪಕನಾಗಿ ಸೇವೆಯನ್ನು ಸಲ್ಲಿಸಿದ್ದರು. ೧೯೨೯ರಲ್ಲಿ ಅವರನ್ನು ಮದ್ರಾಸ್

ವಿಶ್ವವಿದ್ಯಾಲಯದ ಭಾರತ ಇತಿಹಾಸ ಹಾಗೂ ಸಂಶೋಧನಾ ಶಾಸ್ತ್ರದ ಪ್ರಧ್ಯಾಪಕರಾಗಿ ನೇಮಿಸಲಾಯಿತು. ಇವರು ನಿವೃತ್ತರಾದ ಮೇಲೆ ಮೈಸೂರು ವಿಶ್ವವಿದ್ಯಾಲಯದ ಪ್ರಾಧ್ಯಾಪಕರನ್ನಾಗಿ ಸಂಶೋಧನೆಯಲ್ಲಿ ತೊಡಗಿಸಿಕೊಂಡರು. ನಂತರ ಇವರು ತಮಿಳು ನಾಡಿನಲ್ಲಿ ಸಾಂಪ್ರದಾಯಕ ಸಂಸ್ಕೃತಿಗಳ ಸಂಸ್ಥೆಯ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದರು.

ನಂತರ ನೀಲಕಂಠ ಶಾಸ್ತ್ರಿಯವರು ಚಿಕಾಗೊ ವಿಶ್ವವಿದ್ಯಾಲಯದಲ್ಲಿ ದಕ್ಷಿಣ ಭಾರತ ಇತಿಹಾಸ ಬಗ್ಗೆ ಅನೇಕ ಉಪನ್ಯಾಸಗಳನ್ನು ನೀಡಿದರು. ಇವರು ಮಿನುಗುವ ತಾರೆಯಂತೆ ಮಿಂಚಿ ತನ್ನ ಕೃತಿಗಳ ಮೂಲಕ ಇತಿಹಾಸವನ್ನು ಎತ್ತಿ ತೋರಿಸಿದ ಮಹಾನ್ ಇತಿಹಾಸ ಲೇಖಕರಾಗಿದ್ದರು"೨೪

"ಕೃತಿಗಳು:–

- ಸೋರ್ಸ್ಸ್ ಆಫ್ ವಿಜಯನಗರ ಹಿಸ್ಟರಿ
- ಹಿಸ್ಟರಿ ಆಫ್ ಶ್ರೀ ವಿಜಯ ಎಂಪೈರ್
- ದಿ ಪಾಂಡ್ಯನ್ ಕಿಂಗ್‌ಡಮ್ (೧೯೨೯).
- ಹಿಸ್ಟರಿ ಆಫ್ ಇಂಡಿಯಾ (೩ ಸಂಪುಟಗಳು)
- ಸ್ಟಡೀಸ್ ಇನ್ ಚೋಳ ಹಿಸ್ಟರಿ ಆಂಡ್ ಅಡ್ಮಿನಿಸ್ಟ್ರೇಷನ್
- ದಿ ಚೋಳಾಸ್ (೨ ಸಂಪುಟಗಳು)
- ಕಲ್ಚರ್ ಆಂಡ್ ಹಿಸ್ಟರಿ ಆಫ್ ದಿ ತಮಿಳ್ಸ್
- ದಿ ತಮಿಳು ಕಿಂಗ್‌ಡಮ್ ಆಫ್ ಸೌತ್ ಇಂಡಿಯಾ (೧೯೪೮)
- ಅಡ್ವಾನ್ಸಡ್ ಹಿಸ್ಟರಿ ಆಫ್ ಇಂಡಿಯಾ (೧೯೭೦)
- ಇಂಡಿಯಾ ಹಿಸ್ಟರಿಕಲ್ ಸರ್ವೆ
- ಲೈಫ್ ಆಂಡ್ ಕಲ್ಚರ್ ಆಫ್ ದಿ ಇಂಡಿಯನ್ ಪೀಪಲ್.
- ಹಿಸ್ಟರಿ ಆಫ್ ಸೌತ್ ಇಂಡಿಯಾ.
- ದಿ ಏಜ್ ಆಫ್ ದಿ ನಂದಾಸ್ ಆಂಡ್ ಮೌರ್ಯಾಸ್
- ತಿರುಮಲ ನಾಯಕ
- ಸಂಗಮ ಲಿಟ್ರಚರ್ ಇಟ್ಸ್‌ಕಲ್ಟ್ಸ್ ಆಂಡ್ ಕಲ್ಚರ್ಸ್
- ಬಯಾಗ್ರಾಫಿ ಆಫ್ ಶಿವಸ್ವಾಮಿ ಅಯ್ಯಾರ
- ಗ್ಲಿನಿಂಗ್ಸ್ ಆನ್ ಸೋಸಿಯಲ್ ಲೈಫ್
- ಸೌತ್ ಇಂಡಿಯನ್ ಇನ್‌ಫ್ಲುಯೆನ್ಸ್ ಇನ್ ದಿ ಫಾರ್ ಈಸ್ಟ್
- ಕಲ್ಚರ್ ಎಕ್ಸ್ ಪ್ಯಾನಾಕ್ಷನ್ ಆಫ್ ಇಂಡಿಯಾ (೧೯೫೯)
- ಕಲ್ಚರಲ್ ಕಾಂಟ್ಯಾಕ್ಟ್ಸ್ ಬಿಟವಿನ್ ಆರ್ಯನ್ಸ್ ಆಂಡ್ ದ್ರಾವಿಡಿಯನ್ಸ್

- ಇಂಡಿಯ ಯಾಜ್ ಸೀನ್ ಇನ್ ದಿ ಬೃಹತ್ ಸಂಹಿತಾ ಆಫ್ ವರಾಹಮಿಹಿರ
- ಫಾರಿನ್ ನೋಟಿಸಸ್ ಆಫ್ ಸೌತ ಇಂಡಿಯಾ
- ಸಮ್ ಡಾಕೊಮೆಂಟ್ಸ್ ಆನ್ ದಿ ಹಿಸ್ಟರಿ ಆಫ್ ಕೋಚಿನ್
- ಹಿಸ್ಟಿರಿಕಲ್ ಮೆಥಡ್
- ಲಕ್ಚರ್ಸ್ ಆನ್ ಫ್ಯಾಕ್ಟರ್ಸ್ ಆಫ್ ಇಂಡಿಯನ್ ಹಿಸ್ಟರಿ
- ಪೋರ್ಚಗೀಸ್ ಆಂಡ್ ದಿ ಡಚ್
- ಸದರನ್ ಇಂಡಿಯಾ
- ಅರಬ್ಬಿಯ ಆಂಡ್ ಆಫ್ರಿಕಾ"[೨೫]

ಕೆ.ಎ. ನೀಲಕಂಠ ಶಾಸ್ತ್ರಿಯವರ ಹಲವಾರು ಕೃತಿಗಳು, ವಸ್ತುನಿಷ್ಠೆ, ವೈಚಾರಿಕತೆ, ನಿಕಟದೃಷ್ಟಿ, ಸೂಕ್ಷ್ಮ ಅವಲೋಕನ ಹಾಗೂ ಪ್ರಾಮಾಣಿಕತೆಗೆ ಹೆಸರಾಗಿವೆ.

**ಕೆ.ಎ. ನೀಲಕಂಠ ಶಾಸ್ತ್ರಿಯವರ ಇತಿಹಾಸ ಮತ್ತು ಸಂಶೋಧನೆ ಬಗ್ಗೆ ಅಭಿಪ್ರಾಯ :**

"ಇತಿಹಾಸವು ಅತ್ಯಂತ ವ್ಯಾಪಕವಾದದ್ದು. ಅದು ಮಾನವ ಕುಲ ಜೀವನದ ಪ್ರತಿ ಮುಖವನ್ನು ಒಳಗೊಂಡಿರುತ್ತದೆ. ಅದು ಕೇವಲ ದೊರೆಗಳ, ಅವರ ಯುದ್ಧಗಳ ವೃತಾಂತವಲ್ಲ. ಅದು ಭೌತ ಪರಿಸ್ಥಿತಿ, ಸಾಮಾಜಿಕ ಸಂಸ್ಥೆ, ದರ್ಶನ, ಮತ ಧರ್ಮ, ಕಲೆ ಮತ್ತು ಸಾಹಿತ್ಯ ಮುಂತಾದ ಎಲ್ಲಾ ವಿಷಯಗಳನ್ನು ಪರಿಶೀಲಿಸುತ್ತದೆ. ಮತ್ತು ಅದು ವೈಜ್ಞಾನಿಕ ಅಧ್ಯಯನದ ಹಾಗೂ ಸತ್ಯಾನ್ವೇಷಣೆಯೇ ಆಗಿರುವುದ್ದರಿಂದ ಪರಿಶೀಲಿಸಿ ಬಳಸಬೇಕು ಎಂದು ಶಾಸ್ತ್ರಿಯವರು ಐದು ರೀತಿಯ ಮೂಲ ಆಧಾರಗಳನ್ನು ಬಳಸಿಕೊಂಡಿದ್ದರು."[೨೬]

ಇವರು ಸಾಹಿತ್ಯ ಪ್ರಮಾಣ, ಶಾಸನಶಾಸ್ತ್ರ ಹಾಗೂ ಇತರ ಕೃತಿಗಳು ಅವುಗಳನ್ನು ಉಪಯೋಗಿಸಿಕೊಳ್ಳುವುದಕ್ಕೆ ಮೊದಲು, ವಿಭಿನ್ನ ದೃಷ್ಟಿಕೋನಗಳಿಂದ ಪರಿಶೀಲಿಸಿ ಅವುಗಳ ಯತಾರ್ಥತೆಯನ್ನು ದೃಢಪಡಿಸಿಕೊಳ್ಳುತ್ತಿದ್ದರು. ನೀಲಕಂಠ ಶಾಸ್ತ್ರಿಯವರು ಈ ಕಟ್ಟುವ ವಿಷಯ ಸಾಮಗ್ರಿಗಳನ್ನು ಬಹು ತೀವ್ರವಾದ ಪರೀಕ್ಷೆಗೆ ಗುರಿಪಡಿಸಿ ಸತ್ಯವನ್ನು ಬೆಳಕಿಗೆ ತರಬೇಕು. ಹಾಗೂ ಗತಕಾಲ ವಿವರಿಸುವಾಗ ಇಂದಿನ ಭಾವನೆ ಹಾಗೂ ಮನೋವಿಕಾರಗಳನ್ನು ಅದರ ಮೇಲೆ ಹೇರಬಾರದು. ಅಷ್ಟೇ ಅಲ್ಲದೆ ಸಿಕ್ಕಂತಹ ಆಧಾರಗಳನ್ನು ಪರಿಶೀಲಿಸುವಾಗ ಸಂಶೋಧಕನು ತಾವೇ ಸ್ವತಃ ಈ ಕಾರ್ಯವನ್ನು ಮಾಡಲು ಸಿದ್ಧನಿರಬೇಕು. ಅದೇ ರೀತಿಯಾಗಿ ಪೂರ್ವ ಕಲ್ಪಿತ ಅಪಾಯಕಾರಿ ಭಾವನೆಗಳ ಹಿಡಿತಕ್ಕೆ ಒಳಗಾಗಬಾರದು. ಹಾಗೆಯೆ ಪೂರ್ವ ಗೃಹ ಪೀಡಿತನಾಗಬಾರದು ಮತ್ತು ತನ್ನೆಲ್ಲ ಮೂಲ ವಿವರಗಳನ್ನು ಬಹು ಪ್ರಮಾಣಿಕತೆ

ಹಾಗೂ ನಿಷ್ಪಕ್ಷಪಾತ ದೃಷ್ಟಿಯಿಂದ ಅರ್ಥೈಸಬೇಕು. ಶಾಸ್ತ್ರಿಯವರು ಇತಿಹಾಸಕಾರರನ್ನು ರಾಸಾಯನ ಶಾಸ್ತ್ರಜ್ಞನಿಗೆ ಹೋಲಿಸುತ್ತಾರೆ.

ಈ ರೀತಿಯಾಗಿ ಆ ವಿಜ್ಞಾನಿಯು ಬಹು ಎಚ್ಚರಿಕೆಯಿಂದ ಪ್ರಯೋಗಗಳನ್ನು ನಡೆಸಿ, ಸತ್ಯವನ್ನು ಕಂಡು ಹಿಡಿಯುತ್ತಾನೋ, ಅದೆ ರೀತಿಯಾಗಿ ಚರಿತ್ರೆಯ ಲೇಖಕರು ಸಹ ಆಧಾರ ಗ್ರಂಥಗಳ ಅತ್ಯಂತ ಸೂಕ್ಷ್ಮ ಹಾಗೂ ಜಾಗರೂಕತೆಯಿಂದ ಮತ್ತು ಪರಿಶೀಲನೆಯಿಂದ ನಿಜಾಂಶಗಳನ್ನು ತಿಳಿದುಕೊಳ್ಳಬೇಕು.

**ಗತಕಾಲದ ಯಥಾವತ್ ಚಿತ್ರಣ:**

ಕೆ.ಎ. ನೀಲಕಂಠ ಶಾಸ್ತ್ರಿಯವರು ಗತಕಾಲದ ಮತ್ತು ಇಂದಿನ ಪರಿಸ್ಥಿತಿಗಳ ವಿಕಾಸವಾಗಿದೆ ಎಂಬುದನ್ನು ತಿಳಿಸುವುದು ಇತಿಹಾಸದ ಕಾರ್ಯ. ಅದು ಇಂದಿನ ಪರಿಸ್ಥಿತಿಯನ್ನು ತಿಳಿದು ಭವಿಷ್ಯತ್ತಿಗೆ ಯೋಜನೆಗಳನ್ನು ಮಾಡಿಕೊಳ್ಳುವುದಕ್ಕೆ ಸಹಾಯಕ ಮಾಧ್ಯಮವಾಗಬೇಕು. ಆದ್ದರಿಂದ ಹಿಂದಿನ-ಇಂದಿನ ಮತ್ತು ಮುಂದಿನ ಕಾಲಗಳಿಗೆ ಅನೋನ್ಯ ಸಂಬಂಧವಿದೆ ಎಂದು ಹೇಳುವದರ ಜೊತೆಗೆ ಶಾಸ್ತ್ರಿಯವರು ನಿರ್ಧಿಷ್ಠ ಭೌಗೋಳಿಕ ಪರಿಸರದಲ್ಲಿ ಸಮಾಜಗಳಾಗಿ ವಾಸಿಸುತ್ತಿರುವ ಜನರ ಸಮಸ್ತ ದಾಖಲೆಯೇ ಇತಿಹಾಸ ಎಂಬುದ್ದಾಗಿ ಎಣಿಸಿ, ಸಂಪೂರ್ಣ ವಸ್ತುನಿಷ್ಠವಾದ ರೀತಿಯಲ್ಲಿ ಇತಿಹಾಸ ರಚನೆ ಸಾಧ್ಯವಿಲ್ಲ. ಹಾಗೂ ಇತಿಹಾಸಕಾರರು ಒಂದೇ ವಿಷಯವನ್ನು ಕುರಿತು ವಿಚಾರ ಮಾಡುವದರಲ್ಲು ಬೆಲೆ ಇದೆ ಎಂಬುದಾಗಿ ಹೇಳಿದ್ದರು.

ಇವರು ಆರ್ಯ ಮತ್ತು ದ್ರಾವಿಡ ಸಂಸ್ಕೃತಿಗಳ ಸಂಬಂಧಗಳನ್ನು ಕುರಿತು ಹೇಳುವಾಗ ಸೌಹಾರ್ದಯುತ ಸಂಯೋಜನೆಗಳಿಗೆ ಹೆಚ್ಚು ಒತ್ತು ನೀಡಿರುವುದನ್ನು ಕಾಣಬಹುದಾಗಿದೆ. ಹಾಗಾಗಿ ಇವರ ಕೃತಿಗಳು ವಸ್ತುನಿಷ್ಠತೆಗೆ ಹೆಸರುವಾಸಿಯಾಗಿವೆ. ಚರಿತ್ರೆಯ ಲೇಖಕನು ಮಾನವ ಹಾಗೂ ಅವನ ಕ್ರಿಯೆಗಳನ್ನು ಅಧ್ಯಯನ ಮಾಡುವದರಿಂದ ಇತಿಹಾಸಕಾರನ ಕೆಲಸ ಕಠಿಣವಾಗಿರುತ್ತದೆ. ಇತಿಹಾಸಕಾರರಿಗೆ ಈ ಕಾರ್ಯ ವಿಜ್ಞಾನಿಯ ಕಾರ್ಯದಷ್ಟೇ ಈ ಕಾರ್ಯ ಕಠಿಣವಾಗಿರುತ್ತದೆ. ತಮಗೆ ಬೇಕಾಗಿರುವ ಆದರ್ಶ ಮತ್ತು ವಿವರಗಳನ್ನು ಮಾತ್ರ ನೋಡಿ ಆರಿಸಿಕೊಳ್ಳುತ್ತಾರೆ. ತಮ್ಮ ನಾಡಿನ ಗತಕಾಲದ ಎಲ್ಲಾ ವಿಚಾರಗಳು ಅತ್ಯುತ್ತಮವಾದವು ಎಂಬುದ್ದಾಗಿ ಸಾಧಿಸಲು ಪ್ರಯತ್ನಿಸುತಿದ್ದಾರೆ.

ನೀಲಕಂಠ ಶಾಸ್ತ್ರಿಯವರು ವಿಷಯ ನಿರೂಪಣೆಯಲ್ಲಿ ಹಾಗೂ ವ್ಯಕ್ತಿ ಚಿತ್ರಣವನ್ನು ನೀಡುವದರಲ್ಲಿ ಅದ್ವಿತೀಯರಾಗಿದ್ದರು. ಅವರು ಕಥನ, ಕಲೆಗೆ ಹೆಚ್ಚಿನ ಗಮನವನ್ನು ಕೊಟ್ಟಿದ್ದಾರೆ. ಅವರ ಶೈಲಿ ಸುಂದರ ಸುಲಲಿತ ಹಾಗೂ ಆಕರ್ಷಕವಾಗಿತ್ತು.

**ವಿಮರ್ಶೆ:**

"ಕೆ.ಎ. ನೀಲಕಂಠ ಶಾಸ್ತ್ರಿಯವರ ಕೃತಿಗಳಲ್ಲಿ ಜಾತಿ ಸಂಘರ್ಷಗಳನ್ನಾಗಲಿ, ಧಾರ್ಮಿಕ ಸಂಘರ್ಷಗಳನ್ನಾಗಲಿ, ಆರ್ಥಿಕ ಸಂಘರ್ಷಗಳನ್ನಾಗಲಿ, ಅಸ್ಪೃಶತೆಯ ವಿಚಾರಗಳನ್ನಾಗಲಿ ಉಲ್ಲೇಖಿಸುವ ಅಥವಾ ವಿಶ್ಲೇಷಿಸುವ ಗೋಜಿಗೆ ಹೋಗಿಲ್ಲ. ಹಾಗಾಗಿ ಸಾಮಾನ್ಯ ಜನರ ಜೀವನದ ಇತಿಹಾಸ ರಚನೆ ಸಂದರ್ಭದಲ್ಲಿ ತಿಪ್ಪೆ ಸಾರಿಸುವ ಕೆಲಸ ಮಾಡಿದರೆನ್ನಿಸುವುದು ಅಲ್ಲದೆ, ಕೆಲವೆಡೆ ಐತಿಹಾಸಿಕ ವ್ಯವಸ್ಥೆಯನ್ನು ಅರ್ಥೈಸುವಲ್ಲಿ ಎಡವಿದ್ದಾರೆ.

**ಉದಾಹರಣೆ:** ಉತ್ತರ ಮೇರೂರು ಶಾಸನದ ಅಗ್ರಹಾರ ವ್ಯವಸ್ಥೆಯನ್ನು ಸ್ಥಳೀಯ ಸರ್ಕಾರದ ವ್ಯವಸ್ಥೆ ಎಂದು ತಪ್ಪಾಗಿ ನಿರೂಪಿಸಿದ್ದಾರೆ. ಒಟ್ಟಿನಲ್ಲಿ ಇವರ ಕೃತಿಗಳು ವಿಮರ್ಶಕ್ಕೊಳಗಾಗಿವೆ ಎಂದು ವಿಮರ್ಶಕರು ವಿಮರ್ಶೆ ಮಾಡಿದ್ದಾರೆ"[೨೭]

**ಮರಣ:**

ಕೆ.ಎ. ನೀಲಕಂಠ ಶಾಸ್ತ್ರಿಯವರು ದಕ್ಷಿಣ ಭಾರತ ಇತಿಹಾಸಕ್ಕೆ ಮತ್ತು ಕರ್ನಾಟಕ ಇತಿಹಾಸಕ್ಕೆ ಅಪಾರವಾದ ಕೊಡುಗೆಗಳನ್ನು ನೀಡಿ, ಅವರು ೧೯೭೫ರಲ್ಲಿ ಮರಣ ಹೊಂದಿದ್ದರು. ಅವರು ಮಾಡಿದ ಸಾಧನೆಗಳು ಇನ್ನೂ ಜೀವಂತವಾಗಿವೆ.

**ವ್ಯಕ್ತಿತ್ವ:**

ಸರಳ ವ್ಯಕ್ತಿತ್ವ ಹೊಂದಿದ ನೀಲಕಂಠ ಶಾಸ್ತ್ರಿಯವರು ದಕ್ಷಿಣ ಭಾರತದ ಅತ್ಯುತ್ತಮ ಹಾಗೂ ಅತಿ ಪ್ರಖ್ಯಾತ ಇತಿಹಾಸಕಾರರಾಗಿದ್ದರು ಎಂಬುದರಲ್ಲಿ ಯಾವುದೆ ಸಂಶಯವೇ ಇಲ್ಲ. ಇವರು ವಿಶೇಷವಾಗಿ ಕರ್ನಾಟಕ ಚರಿತ್ರೆಗೆ ಅಪಾರವಾದ ಕೊಡುಗೆಯನ್ನು ನೀಡುವದರ ಮೂಲಕ, ವಿಜಯನಗರ ಸಾಮ್ರಾಜ್ಯದ ಬಗ್ಗೆ ತಿಳಿಸಿ, ನಂತರ ಮೌರ್ಯರ ಬಗ್ಗೆ ಕೃತಿಗಳನ್ನು ರಚಿಸಿ, ದಕ್ಷಿಣ ಭಾರತದ ಚರಿತ್ರೆಯನ್ನು ವೈಜ್ಞಾನಿಕ ರೀತಿಯಲ್ಲಿ ರಚಿಸಲು ಶ್ರಮಿಸಿದ್ದ ಮಹಾನ್ ಧೀಮಂತ ಇತಿಹಾಸ ತಜ್ಞರಾಗಿದ್ದರು. ಇವರು ಜನರ ಇತಿಹಾಸ ಹಾಗೂ ಸಂಸ್ಕೃತಿ, ಕಥೆಯನ್ನು ಮನರ್ ರಚಿಸುವ ಕಾರ್ಯದಲ್ಲಿ ಇವರು ನೀಡಿದ ಕೊಡುಗೆ ಅತ್ಯಂತ ಪ್ರಮುಖವಾಗಿದೆ.

ಒಟ್ಟಿನಲ್ಲಿ ಇವರು ದಕ್ಷಿಣ ಭಾರತದ ಇತಿಹಾಸ ಕ್ಷೇತ್ರದಲ್ಲಿ ಮತ್ತು ಕರ್ನಾಟಕ ಇತಿಹಾಸದಲ್ಲಿ ಅಗ್ರಸ್ಥಾನ ಇರುವಷ್ಟೇ ಅಲ್ಲದೆ, ಅವರು ಆಧುನಿಕ ಭಾರತ ಚರಿತ್ರೆಯಲ್ಲಿ ಅಗ್ರಪಂಕ್ತಿಯಲ್ಲಿದ್ದಾರೆ.

**

# ೮. ಆರ್.ಆರ್. ದಿವಾಕರ ಕ್ರಿಶ. ೧೮೯೪-೧೯೯೦



## ಪರಿಚಯ:



ಆರ್.ಆರ್. ದಿವಾಕರ



ಕನ್ನಡ ನಾಡಿನ ಸ್ವಾತಂತ್ರ್ಯ ಧುರಿಣರೆಂದರೆ ಶ್ರೀ ರಂಗನಾಥ ದಿವಾಕರ ಅಂತಹವರಿಂದ ಹಾಗೂ ಇವರು ಪ್ರಯತ್ನದಿಂದ ಭಾಷಾಧಾರಿತ ರಾಜ್ಯಗಳ ವಿಂಗಡಣೆಗೆ ಅನುಕೂಲವಾಯಿತು. ಇವರು ಒಬ್ಬ ಉತ್ತಮ ಪ್ರತಿಭಾವಂತ ಕರ್ನಾಟಕ ಚರಿತ್ರೆಯ ಇತಿಹಾಸ ತಜ್ಞರು. ಇವರು ಈ ಕನ್ನಡ ನಾಡಿಗೋಸ್ಕರ ಬಹಳಷ್ಟು ಶ್ರಮಪಟ್ಟ ಮಹಾನ್ ಧುರಿಣರೆಂದು ಹೇಳಬಹುದು. ೧೯೫೬ರ ನವೆಂಬರ ೧ರಂದು ಕರ್ನಾಟಕ ರಾಜ್ಯದ ಏಕೀಕರಣವು ನೇರವರಿಸಲಾಗಿ, ಆ ಒಂದು ಪ್ರಮುಖ ಘಟನೆಯು ರಾಜ್ಯದ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಗಣನೀಯ ಬದಲಾವಣೆ ತಂದಿತ್ತು. ಇವರ ಜೀವನ ಚರಿತ್ರೆಯನ್ನು, ಸಾಧನೆಯನ್ನು ರಾಜ್ಯದ ಪ್ರಗತಿಯ ಹಿನ್ನಲೆಯಲ್ಲಿ ವಿವರಿಸಲು ಪ್ರಯತ್ನಿಸುತ್ತದೆ. ಪ್ರಸ್ತುತ ಗ್ರಂಥವು ಉತ್ತರ ಕರ್ನಾಟಕ ರಾಜಕೀಯ ನೇತಾರ ಶ್ರೀ ರಂಗನಾಥ ದಿವಾಕರರ ಕುರಿತಾಗಿ ೧೯೫೬ರಲ್ಲಿ ಉತ್ತರ ಕರ್ನಾಟಕವು ಪ್ರತ್ಯೇಕ ರಾಜ್ಯವಾದಾಗ ಅದರ ಭೌಗೋಳಿಕ ವಿಸ್ತೀರ್ಣದ ಅಂದಾಜು ೩.೫ ೬.೮೯ ಚ.ಕಿ.ಮೀ. ಇತ್ತು. ಸಧ್ಯದ ಸಂದರ್ಭದಲ್ಲಿ ಹರಿಕಾರ ಎಂಬ ಪದ ಬಹು ಅರ್ಥ ಪೂರ್ಣವಾದದ್ದು. ಈ ಪದಕ್ಕೆ ಅರ್ಥ ಬಂದಾದರು ೧೯ನೇ ಶತಮಾನದ ಉತ್ತರ ಭಾಗದಲ್ಲಿಯೇ ಈ ಪದ ಶ್ರೀ ಆರ್. ದಿವಾಕರ ಅಂತವರಿಗೆ ಅನ್ವಯವಾಗುತ್ತದೆ. ಇವರು ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಪ್ರಾಮುಖ್ಯತೆ ಪಡೆದ ಒಬ್ಬ ನೇತಾರ ಎಂದು ಹೇಳಬಹುದು. ಇವರು ಹಲವಾರು ಕೃತಿಗಳು ಬರೆಯುವದರ ಮೂಲಕ ಕನ್ನಡ ನಾಡಿನ ಕೀರ್ತಿ ಹೆಚ್ಚಿಸಿದ್ದಾರೆ. ಇವರ ಕೃತಿಗಳು ಕನ್ನಡ ಮತ್ತು ಇಂಗ್ಲೀಷನಲ್ಲಿ ಪ್ರಕಟವಾಗಿರುವುದು ಒಂದು ಸುದೈವವೆ. ಪ್ರಕಟಿತ ಕೃತಿಗಳು ಸದಾ ಅನುಕೂಲವಾದವುಗಳು. ಆರ್. ದಿವಾಕರರ ಕೃತಿಗಳಾದ ಸತ್ಯಾಗ್ರಹ ಮತ್ತು ಮೈಜೈಲ್ ಯಾತ್ರಾ ಲಭ್ಯವಿದೆ. ಅದರಂತೆ ಪಾಶ್ಚಿಮಾತ್ಯ ಚಿಂತನೆಯ ಪ್ರಭಾವದಿಂದಾಗಿ ದಿವಾಕರಂತವರು ಅನೇಕ ಕೃತಿಗಳನ್ನು ಬರೆದಿದ್ದಾರೆ. ಅಂತಹ ಕೃತಿಗಳಿಂದಾಗಿ ನಮ್ಮ ದೈಹಿಕ ಬೆಳವಣಿಗೆಯನ್ನು ಸುಲಭವಾಗಿ ಅರ್ಥೈಸಬಹುದು. ವೃತ್ತ ಪತ್ರಿಕೆಗಳ ಬಳಕೆವಾಯಿತ್ತು. ಹೈದರಾಬಾದ ಕರ್ನಾಟಕದಲ್ಲಿ ಇವರ ಜೊತೆ ಚಳುವಳಿಯಲ್ಲಿ ಭಾಗವಹಿಸಿ ಗಮನಹಾರ ಗಣ್ಯ ಮಂತ್ರಿಗಳಾದ ಹೈದರಾಬಾದ ಕರ್ನಾಟಕದ

ರೂವಾರಿಗಳಾದ ಶ್ರೀ ಚಂದ್ರಶೇಖರ ಪಾಟೀಲ್, ಉಮಾಬಾಯಿ ಕುಂದಾಪುರ, ಕಮಲಾಬಾಯಿ ಚಟ್ಟೊಪಾಧ್ಯಾಯ ಮುಂತಾದವರು ಈ ರೀತಿ ಕೆಲಸ ಮಾಡಿದನ್ನು ಇಲ್ಲಿ ಪ್ರಶಂಸನೀಯ ವಿಷಯವಾಗಿದೆ. ಇಂತಹ ಮಹಾನ್ ವ್ಯಕ್ತಿಯ ಜೀವನ ಸಾಧನೆಯು ಈ ಕನ್ನಡ ನಾಡಿನ ಮೇಲೆ ಬೆಳಕು ಚಲ್ಲುತ್ತದೆ.

**ಜನನ:**

ಇವರು ೩೦ನೇ ಜನೇವರಿ ೧೮೯೪ರಲ್ಲಿ ಧಾರವಾಡದ ಮರಿಹಾಳದಲ್ಲಿರುವ ಅವರ ಸೋಹದರಮಾವನ ಮನೆಯಲ್ಲಿ ಜನಿಸಿದ್ದರು. ರಾಮಚಂದ್ರ ದಿವಾಕರರು ದಕ್ಷಿಣದ ಮರಾಠ ರೈಲ್ವೆಯ ಧಾರವಾಡ ಕಛೇರಿಯಲ್ಲಿ ಗುಮಾಸ್ತರಾದರು. ಆಗ ಅವರ ತಂದೆಗೆ ಸಿಗುವ ಸಂಬಳ ರೂ. ೧೫೦೦/- ಮಾತ್ರ, ಆರ್.ಆರ್. ದಿವಾಕರ ಅವರ ತಂದೆಯ ಮೂರನೆಯ ಮಗನಾಗಿ ಶಿಸ್ತಿನಿಂದ ಬೆಳೆದವರು. ಅವರನ್ನು ಬಾಲ್ಯದಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಿದ್ದರು. ರಂಗ, ರಂಗಪ್ಪಾ ನಂತರ ರಂಗರಾವ ಹಾಗೂ ರಂಗನಾಥರಾಗಿ ಪರಿಣಮೀಸಿದವು.

**ಶಿಕ್ಷಣ:**

"ಬಾಲಕ ರಂಗನಾಥರು ತಮ್ಮ ಬಾಲ್ಯದ ಶಿಕ್ಷಣವನ್ನು ಬೆಳಗಾವಿಯಲ್ಲಿ ಆರಂಭಿಸಿದರು. ಇವರು ಆಗ ಕನ್ನಡ ಹಾಗೂ ಇಂಗ್ಲೀಷ ಎರಡರಲ್ಲಿ ಅಭ್ಯಾಷಿಸಿದ್ದರು. ಅವರ ನೆಚ್ಚಿನ ಶಿಕ್ಷಕರಾದ ಶ್ರೀ ಮಂಡಗೀಯವರಾಗಿದ್ದರು. ಬಾಲಕ ದಿವಾಕರ ತಂದೆಯಂತೆ ರಾಷ್ಟ್ರ ಪ್ರೇಮಿಯಾಗಿದ್ದರು. ಆಗಲೇ ಅವರು ಲೋಕಮಾನ್ಯ ಬಾಲಗಂಗಾಧರ ತಿಲಕರ ಪ್ರಭಾವಕ್ಕೆ ಒಳಗಾಗಿದ್ದರು. ಆದರೂ ಇವರ ಮಾಧ್ಯಮಿಕ ಶಿಕ್ಷಣವನ್ನು ಹುಬ್ಬಳಿಯಲ್ಲಿ ಲ್ಯಾಮಿಂಗ್ಟನ್ ಮಾಧ್ಯಮಿಕ ಶಾಲೆಯಲ್ಲಿ ಓದಿದ್ದರು. ಅವರು ೧೯೧೬ರಲ್ಲಿ ಅಲ್ಲಿಯ ವಿಕ್ಟೋರಿಯ ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿರುವಾಗ ಪ್ರಾಂಶುಪಾಲ ಶ್ರೀ ಆರ್.ಎಸ್. ಹುಕ್ಕೇರಿಯವರ ಪರಿಚಯವಾಯಿತು. ನಂತರ ಅವರ ಸಂಬಂಧ ಗಟ್ಟಿಯಾಗಿ ಬೆಳೆಯಿತು[೨೮].

ಇವರು ಮುಖ್ಯವಾಗಿ ಶಾಲಾ ಶಿಕ್ಷಕರಾಗಲು ಅರ್ಹರಾಗಿದ್ದರು ಕೂಡಾ, ತಿಲಕರ ಪ್ರಭಾವದಿಂದಾಗಿ ಅವರು ಕಾನುನೂ ಅಧ್ಯಯನಕ್ಕೆ ಮುಂಬೈಯಿಗೆ ಹೋದರು. ಅವರು ಒಂದೇ ಕಾಲಕ್ಕೆ ಕಾನುನೂ ಪದವಿ ಮತ್ತು ಎಮ್.ಎ. ಇಂಗ್ಲೀಷ ಮುಗಿಯಿಸಿ ಕೋಲಾಪೂರದ ರಾಜಾರಾಮ ಮಹಾವಿದ್ಯಾಲಯದಲ್ಲಿ ಉಪನ್ಯಾಸಕರಾಗಿದ್ದರು. ೧೯೨೦ರಲ್ಲಿ ಅವರು ವಿಕ್ಟೋರಿಯ ಮಾಧ್ಯಮಿಕ ಶಾಲೆಗೆ ಬಂದು ಮಹಾವಿದ್ಯಾಲಯವನ್ನು ಆರಂಭಿಸಲು ಚಿಂತಿಸಿದ್ದರು.

ಆಗಲೇ ೧೯೦೫-೦೬ರಲ್ಲಿ ಭಾರತದಲ್ಲಿ ಬ್ರಿಟಿಷ್ ಆಳ್ವಿಕೆಯ ವಿರುದ್ಧ ಸ್ವದೇಶಿ ಆಂದೋಲನ ಯಶಸ್ವಿಯಾಗಿ ಜರುಗಿಸಿ, ದೇಶದ ಯುವ ಜನರ ಮೇಲೆ ಎಲ್ಲೆಲ್ಲೂ ಪ್ರಭಾವನ್ನು ಉಂಟುಮಾಡಿತ್ತು. ಆಗ ಬೆಳಗಾವಿಯಲ್ಲಿ ತಿಲಕರ ಭಾಷಣ ಜರುಗಿದ್ದು, ಅದರಿಂದ ದಿವಾಕರರು ತುಂಬಾ ಪ್ರಭಾವಿತರಾದರು. ಮಹಾರಾಷ್ಟ್ರದ ಪುಣೆಯು ದಕ್ಷಿಣದ ಸ್ವತಂತ್ರ್ಯ ಚಳುವಳಿಯ ಕೇಂದ್ರ ಸ್ಥಾನವಾಗಿದ್ದು, ಲೋಕ ಮಾನ್ಯರೇ ಅದಕ್ಕೆಲ್ಲಾ ಕಾರಣೀಭೂತರಾಗಿದ್ದರು. ಲೋಕಮಾನ್ಯ ತಿಲಕರು ಯುವ ಸ್ವಾತಂತ್ರ್ಯ ಹೋರಾಟಗಾರರಾಗಿ ಗುರುತುವಾಗಿದ್ದರು.

**ವೈವಾಹಿಕ ಜೀವನ:**

ಶ್ರೀ ದಿವಾಕರರು ೧೯೧೮ರಲ್ಲಿ ರಾಧಾಬಾಯಿಯನ್ನು ಮಧುವೆಯಾದರು. ಅವರ ಭಾರತದ ರಾಷ್ಟ್ರೀಯ ಚಳುವಳಿಯ ಚಟುವಟಿಕೆಗಳಿಂದಾಗಿ ಸಂತೃಪ್ತಿಕರವಾದ ವೈವಾಹಿಕ ಜೀವನವನ್ನು ಹೊರಡಿಸಲಾಗದೆ. ಇದರಿಂದಾಗಿ ಅವರಿಗೆ ಆರ್ಥಿಕ ಸಂಕಟಗಳು ಬಂದಿವೆ. ಆರು ವರ್ಷಗಳ ನಂತರ ಇವರಿಗೆ ಮಗನು ಜನಿಸಿದನು. ಆದರೆ ೬ ವರ್ಷದ ಅನಂತನು ತನ್ನ ತಾಯಿಯನ್ನು ೧೯೩೧ರಲ್ಲಿ ಕಳೆದುಕೊಂಡನು. ಆಗ ದಿವಾಕರರು ಸಂಯುಕ್ತ ಕಥಾವೃತ್ತಮಾನ ಪತ್ರಿಕೆಯೊಂದಕ್ಕೆ 'ನಾಯಕ' ಎಂಬ ಹೆಸರಿನಲ್ಲಿ ಆ ವಾರದ ಅಂಕಣವನ್ನು ಬರೆಯುತಿದ್ದರಂತೆ. ಹೆಂಡತಿಯ ಮರಣದಿಂದಾಗಿ ದುಃಖ ಮಡವಿನಲ್ಲಿದ್ದ ಇವರು, ಆ ಸುಗ್ಗಿಯನ್ನು ಮಾಡದೆ ಅವರಷ್ಟೆ ರೋಧಿಸಿದರು. ದಿವಾಕರರ ಪತ್ನಿ ತೀರಿಕೊಂಡಾಗ ಇವರ ವಯಸ್ಸು ಕೇವಲ ೩೭. ಆದ್ದರಿಂದ ಇವರ ತಾಯಿ ಇನ್ನೊಂದು ಮದುವೆಯಾಗಲು ದಿವಾಕರರನ್ನು ಒತ್ತಾಯಿಸಿದ್ದಳು. ಆದರೆ ದಿವಾಕರರ ತಂದೆ ಅದಕ್ಕೆ... ರಂಗನಾಥ, ನೀನು ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವಾಗಲೆ ಒಂದು ಮದುವೆಯಾಗಿದ್ದೆ. ಇನ್ನೊಂದು ಮದುವೆಯಾಗಿ ಆಕೆಗೆ ತೊಂದರೆ ನೀಡುವುದು ಸರಿಯಲ್ಲ. ತಂದೆಯ ಉಪದೇಶವು ಮಗನಿಗೆ ಅರ್ಥವಾಗಿ, ದಿವಾಕರರು ಇನ್ನೊಂದು ಮದುವೆಯಾಗದೆ ದೇಶದ ಸ್ವಾತಂತ್ರ್ಯಕ್ಕಾಗಿ ತಮ್ಮ ಜೀವನ ಮುಡುಪಾಗಿಟ್ಟರು.

ಅದು ಮಹಾತ್ಮ ಗಾಂಧೀಯವರ ಉಪದೇಶದಂತೆ ಬ್ರಿಟೀಷರನ್ನು ಧಿಕ್ಕರಿಸುವ ಸೇನೆ, ಅಂಗಡಿಗಳನ್ನು ಮುಚ್ಚುವ ಚಳುವಳಿ ನಡೆದಿತ್ತು. ಆ ಚಳುವಳಿಯು ಧಾರವಾಡದಲ್ಲಿ ಜರುಗಿತ್ತು. ಆಗ ಪೊಲೀಸರು ಗುಂಡನ್ನು ಹಾರಿಸುತ್ತಿದ್ದರು. ಅದರಲ್ಲಿ ಮೂವರು ಅಸುನಿಗಿದ್ದರು. ಈ ಚಳುವಳಿಯನ್ನು ಹತ್ತಿಕ್ಕಲು ಬ್ರಿಟಿಷರು ೨೮ ಕಾಂಗ್ರೆಸ್ ಮತ್ತು ಖಿಲಾಪತ್ ನಾಯಕರನ್ನು ಬಂದಿಸಿತ್ತು. ೧೯೨೧ರಿಂದ ೧೯೪೭ರ ಅವಧಿಯಲ್ಲಿ ರಂಗನಾಥ ದಿವಾಕರವರು ಸುಮಾರು ೭ ವರ್ಷ ೧೦ ತಿಂಗಳು ಜೈಲಿನಲ್ಲಿದ್ದರು. ಅವರನ್ನು ಮೊಟ್ಟಮೊದಲು ೧೯೨೧ರಲ್ಲಿ ಸೆಡಿಶೇನ್ ಆಪಾದನೆಯ ಮೇಲೆ ಬಂಧಿಸಲಾಯಿತ್ತು. ನಂತರ ಅವರು ಕರ್ಮವೀರ ಪತ್ರಿಕೆಯಲ್ಲಿ

ದೇಶಾಭಿಮಾನದ ಲಾವಣಿಗಳನ್ನು ಪ್ರಕಟಿಸಿದರೆಂದು ಅವರನ್ನು ೧೯೨೩ ರಿಂದ ೧೯೨೫ರ ವರೆಗೆ ಪುಣೆಯ ಎರವಾಡ ಸೇರಮನೆಯಲ್ಲಿ ಇಡಲಾಯಿತು. ನಂತರ ಎರಡು ವರ್ಷಗಳಲ್ಲಿ ದಿವಾಕರವರು ಭಾರಿ ಪ್ರಚಾರ ಹಾಗೂ ಹಿಂದಿ ಭಾಷೆ ಕಲಿಕೆಗಾಗಿ ಶ್ರಮಿಸಿದ್ದರು. ದಿವಾಕರರ ವೈವಾಹಿಕ ಜೀವನದ ಸಂದರ್ಭದಲ್ಲಿ ನಡೆದ ಪ್ರಮುಖ ಘಟನೆಗಳಾಗಿವೆ. ಇವರು ಕರ್ನಾಟಕ ರಾಜ್ಯದ ಏಕೀಕರಣದ ನೇತಾರರಾಗಿ ತಾಯಿನಾಡು, ದೇಶ ಸೇವೆಯನ್ನು ೭೦ ವರ್ಷ ಕಾಲ ಮಾಡಿದ್ದಾರೆ.

**ಸೇವಾನುವೃತ್ತಿ:**

ಶ್ರೀ ರಂಗನಾಥ ದಿವಾಕರರು "ಬೊಧನೆಯು ಒಂದು ಪವಿತ್ರ ವೃತ್ತಿ" ಎಂದು ನಂಬಿದ್ದರು. ಅಂತೆಯೇ ಅವರು ಬೋಧಕರಾಗಿ ತಮ್ಮ ಸೇವಾನುವೃತ್ತಿಯನ್ನು ಆರಂಭಿಸಿದ್ದರು. ತಿಲಕರಂತೆ ರಾಜಕೀಯ ಪ್ರವೇಶಿಸಿ ದೇಶ ಸೇವೆಯನ್ನು ಮಾಡಲು ಆಶೀಸಿದ್ದರು. ೧೯೨೦ರ ವರ್ಷವು ಭಾರತ ರಾಜಕೀಯ ಚರಿತ್ರೆಯಲ್ಲಿ ವಾಟರ್ ಸೆಡ್ಡದಂತೆ ಪ್ರಣಮಿಸುತ್ತದೆ. ಇದೇ ವರ್ಷ ತಿಲಕರು ಸ್ವರ್ಗವಾಸಿಯಾಗಿದ್ದರು. ಹಾಗೂ ಇದೇ ವರ್ಷ ಗಾಂಧೀಜಿಯವರು ಅಹಿಂಸಾಪರ ಚಳುವಳಿಯನ್ನು ಆರಂಭಿಸಿದ್ದರು. ಆಗಲೆ ಕೇವಲ ೬ ತಿಂಗಳು ಶಿಕ್ಷಕರಾಗಿ ಸೇವೆ ಆರಂಭಿಸಿರುವ ರಂಗನಾಥ ದಿವಾಕರರಿಗೆ ಗಾಂಧೀಜಿಯ ಕೂಗು ಕೇಳಿಸಿತ್ತು. ಇದೇ ವೇಳೆ ದಿವಾಕರವರು ತಮ್ಮ ಶಿಕ್ಷಣ ಸಂಸ್ಥೆಯಲ್ಲಿ ತಮ್ಮ ಸಹ ಉದ್ಯೋಗಿಗಳೊಂದಿಗೆ ಭಿನ್ನತೆಯನ್ನು ಹೊಂದಿ ಅವರ ಬೋಧನಾ ವೃತ್ತಿಗೆ ರಾಜಿನಾಮೆಯನ್ನು ನೀಡಿದ್ದರು.

ದಿವಾಕರವರು ೧೯೨೦ರಲ್ಲಿ 'ರಾಜಹಂಸ' ಎಂಬ ಸ್ಥಳೀಯ ಪತ್ರಿಕೆಗೆ ಲೇಖನಗಳನ್ನು ಬರೆಯಲು ಆರಂಭಿಸಿದ್ದರು. ಕೆಲವೇ ತಿಂಗಳಲ್ಲಿ ದಿವಾಕರರು ಮಧುರಾವ ಕಬ್ಬೂರ ಹಾಗೂ ಆರ್.ಎಸ್. ಹುಕ್ಕೆರಿಕರ್ ಜೊತೆ ಸೇರಿ ಕರ್ಮವೀರ ಪತ್ರಿಕೆಯನ್ನು ಆರಂಭಿಸಿದ್ದರು. ಕರ್ನಾಟಕ ಸಾಂಸ್ಕೃತಿಕ ಇತಿಹಾಸದಲ್ಲಿ ಒಂದು ಮೈಲುಗಲ್ಲಾಗಿದೆ. ಈಗ ದಿವಾಕರರು ಸಾಮಾಜಿಕ ಚಟುವಟಿಕೆಗಳು ಬೋಧನಾ ಕೊಠಡಿಯಿಂದ ಹೊರಬಂದು ಸಮಾಜಕ್ಕೆ ಬೋಧನೆ ಸಿದ್ಧಪಡಿಸಿದ್ದರು.

ದಿವಾಕರರು ೧೯೧೯ರಲ್ಲಿ ಧಾರವಾಡದ ವಿಕ್ಟೋರಿಯಾ ಮಾಧ್ಯಮಿಕ ಶಾಲೆಯಲ್ಲಿ ಶಿಕ್ಷಕರಾಗಿದ್ದರು. ಅವರು ಬಹುಮುಖ ಪ್ರತಿಭೆಯ ಜೀವಿ. ಅವರೊಬ್ಬ ಶಿಕ್ಷಕರು, ಪತ್ರಕರ್ತರು, ಬರಹಗಾರರು, ಸತ್ಯಾಗ್ರಹಿಗಳು, ಸಂವಿಧಾನ ತಜ್ಞರು ನಂತರ ಮಂತ್ರಿಗಳು ಹಾಗೂ ಗವರ್ನರಾಗಿ ಸೇವೆ ಸಲ್ಲಿದ್ದರು. ಒಮ್ಮೆ ಅವರು ಬೋಧನಾ ವೃತ್ತಿಯನ್ನು ನಿಲ್ಲಿಸಿದ್ದರು. ಅದನ್ನು ೧೯೨೭ರ ವರೆಗೆ ಮುಂದುವರೆಸಿದ್ದರು. ಪತ್ರಿಕೋದ್ಯಮ ಹಾಗೂ ಭಾರತದ ರಾಷ್ಟ್ರೀಯ ಚಳುವಳಿಗಳು ದಿವಾಕರರ ಜೀವನಾಡಿಯಾದವು ಎಂದು ಹೇಳಬಹುದು.

**ಪ್ರಾಧ್ಯಾಪಕ:**

ಆರ್.ಆರ್. ದಿವಾಕರರು ತಮ್ಮ ಕಾಲೇಜು ಜೀವನದಲ್ಲಿ ಭಾರತದ 'ಅಶಾಂತಿಯ ತಂದೆ' ಎಂದು ಕರೆಯಲ್ಪಟ್ಟ ಬಾಲಗಂಗಾಧರ ತಿಲಕರ ಪ್ರಭಾವಕ್ಕೆ ಒಳಗಾದರು. ನಂತರ ದಿವಾಕರರು ಶಿಕ್ಷಕರಾದರು. ತಿಲಕರ ಉಪದೇಶದಿಂದಾಗಿ ದೇಶದ ಸೇವೆಗಾಗಿ ಕಾನುನೂ ಪದವಿಯನ್ನು ಪಡೆಯಲು ಮುಂಬೈಯಿಗೆ ತೆರಳಿ, ಕಾನುನೂ ಹಾಗೂ ಎಂ.ಎ. ಪದವಿಗಳೆರಡನ್ನು ಗಳಿಸಿದರು. ಕೊಲ್ಲಾಪೂರದ ರಾಜಾರಾಮ ವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಸೇವೆ ಆರಂಭಿಸಿದ್ದರು. ನಂತರ ಅವರು ಕೆ.ಇ. ಸೋಸೈಟಿಯ ಕಾಲೇಜಿನಲ್ಲಿ ಉಪನ್ಯಾಸಕರಾದರು. ಧೀಮಂತರಾದ ಶ್ರೀ ಎಸ್. ಹುಕ್ಕೆರಿಕರ್‌ರ ಈ ಕಾಲಘಟ್ಟವು ಕಠಿಣವಾದದಾಗಿತ್ತು. ೧೯೬೫-೬೬ರ ಭಾರತದ ಸ್ವದೇಶಿ ಆಂದೋಲನ ಭಾರತೀಯ ಯುವಕರನ್ನು ದೇಶದ ಸೇವೆ ಸ್ವಾತಂತ್ರ್ಯಕ್ಕಾಗಿ ಹೊಡೆದೆಬ್ಬಿಸಿದ್ದು, ದಿವಾಕರರ ಜೀವನದಲ್ಲಿ ಕಾಣಬಹುದು. ಆಗ ಬಾಲ ಗಂಗಾಧರ ತಿಲಕರು ಬೆಳಗಾವಿಗೆ ಭೇಟಿ ನೀಡಿ ಅಲ್ಲಿ ಸ್ವಾತಂತ್ರ್ಯದ ಬಗ್ಗೆ ಆವೇಶ ಭರಿತವಾಗಿ ಭಾಷಣ ಮಾಡಿದ್ದರು. ಆಗ ಅವರು ಪುಣೆಯಲ್ಲಿ ಸ್ವಾತಂತ್ರ್ಯ ಚಳುವಳಿಗಾರರ ಗುರುವಾಗಿ ಪರಿಣಮಿಸಿದ್ದರು.

ತಿಲಕರ ರಾಜಕೀಯ ಪ್ರಭಾವಕ್ಕೆ ಒಳಗಾದ ಯುವಕರು ಧಾರವಾಡದ ವಿಕ್ಟೋರಿ ವಿದ್ಯಾಲಯಕ್ಕೆ ಬಂದಾಗ ಅಲ್ಲಿ ಆರ್.ಎಸ್. ಹುಕ್ಕೆರಿಕರ ರವರು ಪ್ರಾಂಶುಪಾಲರಾಗಿದ್ದರು. ನಂತರ ಅವರಿಬ್ಬರು ಒಂದುಗೂಡಿ ಸ್ವಾತಂತ್ರ್ಯ ಚಳುವಳಿಯನ್ನು ನಡೆಸಿದ್ದರು.

**ಪತ್ರಿಕಾ ಕರ್ತ:**

"ಬಹುಮುಖ ಪ್ರತಿಭೆಯ ರಂಗನಾಥ ದಿವಾಕರವರು ಕೇವಲ ಭಾರತೀಯ ಚಳುವಳಿಯ ಏಕ ಮುಖವಾದ ಕನಸನ್ನು ಕಂಡವರು. ಅಂತೆಯೇ ಅವರು ರಾಷ್ಟ್ರೀಯ ಸಾಹಿತ್ಯ ಮುದ್ರಣಾ ಟ್ರಸ್ಟ್‌ನ್ನು ಆರಂಭಿಸಿ, ಬೆಳಗಾವಿಯಲ್ಲಿ ಮೊಹರೆ ಹನುಮಂತರಾಯರು ನಡೆಸುತ್ತಿದ್ದ "ಸಂಯುಕ್ತ ಕರ್ನಾಟಕ ದಿನ ಪತ್ರಿಕೆ"ಯನ್ನು ನಡೆಸಲು ನಿರ್ಧರಿಸಿದ್ದರು. ಆ ಪತ್ರಿಕೆ ೧೯೩೫ರಲ್ಲಿ ಹುಬ್ಬಳಿಗೆ ಸ್ಥಳಾಂತರಗೊಂಡು ಅಲ್ಲಿಂದ ಇಲ್ಲಿಯವರೆಗೆ ಗಮನಾರ್ಹವಾದ ದೇಶ ಸೇವೆ ಮಾಡುತ್ತಲಿದೆ. ಇನ್ನೊಂದು ಗಮನಾರ್ಹ ಅಂಶವೆಂದರೆ ದಿವಾಕರರು ಓರ್ವ ಬರಹಗಾರರಾಗಿದ್ದರು. ಅವರು ಪ್ರತಿಸಲ ಜೈಲಿನಲ್ಲಿ ವಾಸವಾಗಿದ್ದಾಗ ಒಂದು ಪುಸ್ತಕ ಬರೆಯುತ್ತಿದ್ದರು. ರಂಗನಾಥ ದಿವಾಕರರು ಒಮ್ಮೆ ಜೈಲಿನಿಂದ ಹೊರಬಂದ ನಂತರ ತಮ್ಮ ಸಾರ್ವಜನಿಕ ಜೀವನದ ಚಟುವಟಿಕೆಗಳನ್ನು ವೃದ್ಧಿಸಿಕೊಂಡರು. ಈಗ ಅವರು ಕರ್ಮವೀರದೊಂದಿಗೆ 'ನವಶಕ್ತಿ' ಎಂಬ ವಾರಪತ್ರಿಕೆಯನ್ನು ಆರಂಭಿಸಿದ್ದರು. ಈ ಪತ್ರಿಕೆಗಳು ದೇಶ ಸೇವೆಗೆ ಮುಡುಪಾಗಿಟ್ಟಂತವುಗಳಾಗಿವೆ"[೨೯].

**ಮುಂಬೈಯ ಕರ್ನಾಟಕದಲ್ಲಿಯ ಪತ್ರಿಕೋದ್ಯಮ:**

"ಮೈಸೂರು ಪ್ರಾಂತ್ಯದ ಪತ್ರಿಕೋದ್ಯಮ, ನಂತರ ಮುಂಬೈಯ ಪ್ರಾಂತ್ಯದ ಕನ್ನಡ ನಾಡಿನಲ್ಲಿ ಪತ್ರಿಕೋದ್ಯಮ ಅತಿ ಹೆಚ್ಚಾಗಿತ್ತು. ೧೯೫೧ರಲ್ಲಿ ಆರಂಭಗೊಂಡ "ಸುಬುದ್ಧಿ ಪ್ರಕಾಶನದ ಸ್ವಾತಂತ್ರ್ಯ ಚಳುವಳಿ ಹಾಗೂ ಇತರ ವಿದ್ಯಾಮಾನ"ಗಳನ್ನು ಪ್ರಕಟಿಸುತ್ತಿತ್ತು. ೧೮೫೭ರ ದೇಶದ ಮೊದಲ ಸ್ವಾತಂತ್ರ್ಯ ಸಂಗ್ರಾಮದ ಸೇವೆ ಸಲ್ಲಿಸಿದ ಅನೇಕ ಸುದ್ದಿ ಪತ್ರಿಕೆಗಳನ್ನು ಸ್ಮರಿಸಿಕೊಳ್ಳಬಹುದು. ಈ ಭಾಗದ ಪ್ರಥಮ ದೊಡ್ಡ ಪತ್ರಿಕೆ ಎಂದರೆ "ಹಿತ್ತಚ್ಛು". ಈ ಪತ್ರಿಕೆ ಆರಂಭಗೊಂಡದ್ದು ಬಿಜಾಪೂರದ 'ಕಲಾದಗಿ' ಎಂಬಲ್ಲಿ. ಅಂದು ಧಾರವಾಡದಿಂದ 'ವಿಜಯ ರಾಜಹಂಸ' ಹಾಗೂ 'ಕರ್ನಾಟಕ ವೃತಾಂತ' ಎಂಬ ಪತ್ರಿಕೆಗಳು ಪ್ರಕಟವಾಗುತ್ತಿದ್ದವು"[೩೦] ಅದೇ ಕಾಲಕ್ಕೆ ಬೆಳಗಾವಿಯಿಂದ ಕೆಲವು ಪತ್ರಿಕೆಗಳು ಮರಾಠಿಗರು ಕನ್ನಡದ ಮೇಲೆ ದಾಳಿ ಮಾಡುತಿದ್ದುದರ ವಿರೋಧ ಸುದ್ದಿ ನೀಡುತಿದ್ದವು. ಹೀಗೆ ಅಂದಿನ ಸಂದರ್ಭದಲ್ಲಿ ಈ ಭಾಗದಲ್ಲಿ ಹಲವಾರು ಪತ್ರಿಕೆಗಳು ಹೊರಡಿಸುತ್ತಿದ್ದರು.

ಶ್ರೀ ರಂಗನಾಥ ದಿವಾಕರರು ಹಲವಾರು ಗ್ರಂಥಗಳನ್ನು ರಚನೆ ಮಾಡುವದರ ಮೂಲಕ ಪತ್ರಿಕೆ ಕ್ಷೇತ್ರದಲ್ಲಿ ಸಂಪಾದಕರಾಗಿ ಸೇವೆ ಸಲ್ಲಿಸಿದ ಧಿಮಂತನಾಯಕರು. ಇವರು ಈ ಪತ್ರಿಕೋದ್ಯಮದಲ್ಲಿ ಮಾಡಿದ ಸೇವೆ ಅಪಾರವಾಗಿದೆ.

**ಕೃತಿಗಳು:**

"ಶ್ರೀ ರಂಗನಾಥ ದಿವಾಕರರು ಕೇವಲ ರಾಜಕೀಯ ಹಾಗೂ ಸಮಾಜಿಕ ನೇತಾರನಾಗಿರದೆ ಒಬ್ಬ ಉತ್ತಮ ಸಾಹಿತ್ಯಗಾರರಾಗಿದ್ದು. ಅವರು ಬಹುಮುಖ ಪ್ರತಿಭೆಯ ವ್ಯಕ್ತಿಯಾದರು. ದಿವಾಕರರು ಕನ್ನಡ, ಇಂಗ್ಲೀಷ ಹಾಗೂ ಮರಾಠಿ ಭಾಷೆಯಲ್ಲಿ ಉತ್ತಮ ಸಾಹಿತ್ಯವನ್ನು ರಚಿಸಿದ್ದಾರೆ.

- ಕರ್ನಾಟಕ ಥ್ರೋ ದಿ ಏಜಸ್ (೧೯೬೮).
- ಕರ್ನಾಟಕ ಏಕೀರಣ ಕಥೆ.
- ಕರ್ಮಯೋಗ
- ಕಾಂಗ್ರೆಸ್ ರನ್ನ ಮಹೊತ್ಸವ
- ಎ ಸ್ಟೋರಿ ಆಫ್ ಸತ್ಯಾಗ್ರಹ
- ಗ್ಲಿಂಪ್ಸಸ್ ಆಫ್ ಗಾಂಧಿಜಿ
- ಭಕ್ತಿ ಸೂತ್ರಗಳು
- ಭಗವಾನ ಬುದ್ಧ
- ಗೀತೆಯ ಹುಟ್ಟು.
- ಪ್ರಾಂತ ಭಾಷೆ ಮತ್ತು ರಾಷ್ಟ್ರ ಭಾಷೆ

* ಹಳ್ಳಿಗರ ಕೈಪಿಡಿ.
* ಅಂತರಾತ್ಮನಿಗೆ.
* ರಾಷ್ಟ್ರೀಯ ಶಿಕ್ಷಣ.
* ದ ನೇಸನ್ಸ್ ಕಾಲ್
* ಉಪನಿಷೇಧ ಪ್ರಕಾಶ
* ಸತ್ಯಾಗ್ರಹದ ಇತಿಹಾಸ ಹಾಗೂ ತಂತ್ರ
* ಗಂಧಿಜೀಯವರ ಬಗ್ಗೆ ಹೊಳವುಗಳು"[೩೧]

ಹೀಗೆ ದಿವಾಕರರು ಹಲವಾರು ಕೃತಿಗಳು ರಚಿಸಿದರು. 'ಅವರ ಕೃತಿಗಳಲ್ಲಿ ಯಾವುದೇ ಪಕ್ಷಪಾತ ಅಥವಾ ಪೂರ್ವಗ್ರಹದಿಂದ ಮುಕ್ತವಾಗಿವೆ' ಎಂಬುದು ಗಮನಾರ್ಹವಾದ ವಿಷಯವಾಗಿದೆ.

**ಶ್ರೀ ರಂಗನಾಥ ದಿವಾಕರರು ರಾಜಕೀಯ ನೇತಾರರು:**

ಇವರು ಸಾಹಿತ್ಯ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ ನಂತರ, ಇವರು ತಮ್ಮ ಗಮನ ರಾಜಕೀಯ ಕಡೆಗೆ ಹರಿಸಿದ್ದರು. ಇವರು ರಾಜಕೀಯದಲ್ಲಿ ಗಾಂಧಿ, ನೆಹರು ಇವರಂತಹ ಪ್ರಭಾವಿ ವ್ಯಕ್ತಿಯೊಂದಿಗೆ ಬೆರೆತು ರಾಜಕೀಯ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ್ದಾರೆ.

**ಗಾಂಧಿ ಹಾಗೂ ದಿವಾಕರರು:-**

"ಶೀ ರಂಗನಾಥ ದಿವಾಕರರು ತಮ್ಮದೇಯಾದ ಜೀವನ ನೀತಿಯನ್ನು ರಚಿಸದೆ ಗಾಂಧಿಯವರ ವೈಧಿಕ ಧರ್ಮದ ರೀತಿ-ನೀತಿಗಳನ್ನು ಪುನರ್‌ಜೀವನಗೊಳಿಸಿದ್ದರು. ಆದ್ದರಿಂದ ಅವರ ವಿಚಾರದಲ್ಲಿ ವಾಸ್ತವವಾದ ಹಾಗೂ ಆದರ್ಶವಾದದ ನಡುವಿನ ಅಂತರವನ್ನು ಕಾಣೆವು. ದಿವಾಕರರು ಹಿಂದು ತತ್ವಜ್ಞಾನನದ ಅಧ್ಯಯನದಿಂದ ಈ ಮಾತು ಸರ್ವವಿಧಿತ. ಅಲ್ಲಿ ಕೆಲವು ಅಪ್ರಸ್ತುತ ವಿಚಾರಗಳು ಇವೆ. ಆದರೆ ಅವರ ವಿಚಾರಗಳನ್ನು ಸಮಷ್ಠಿ ಪ್ರಜ್ಞೆಯ ಗಮನಿಸಿದ್ದರೆ ಅಲ್ಲಿ ಐಕ್ಯವಿದೆ. ದಿವಾಕರರು ತಮ್ಮ ರಾಜಕೀಯ ವಿಚಾರದಲ್ಲಿ ಗಾಂಧಿಜೀಯವರ ತತ್ವಗಳನ್ನು ಅಳವಡಿಸಿಕೊಂಡು ಮುಂದು ನಡೆದ ದಾರಿಗಳಾಗಿವೆ. ಸತ್ಯ ಹಾಗೂ ಅಂಹಿಸೆಗಳು ದಿವಾಕರರ ವಿಚಾರ ಚಿಂತನೆಯ ಅಡಿಗಲ್ಲುಗಳಾಗಿವೆ ಎಂಬುದನ್ನು ನಾವು ಅರಿಯಬೇಕು. ದಿವಾಕರರು 'ಸತ್ಯದ ಸಾಕ್ಷಾತ್ಕಾರಕ್ಕಾಗಿ ಅಹಿಂಸಾ ಮಾರ್ಗಗಳನ್ನು ಅನುಸರಿಸಬೇಕು' ಎನ್ನುತ್ತಾರೆ. ಈ ದಿಶೆಯಲ್ಲಿ ಮನುಷ್ಯ ಓರ್ವ ಸಾಮಾಜಿಕ ಜೀವಿಯಾಗಿ ಹಿಂಸೆಯ ನೆರಳಲ್ಲೋ, ಹತ್ತಿರದಲ್ಲೊ ಚಲಿಸಬೇಕಾಗುತ್ತದೆ. ಅದಕೋಸ್ಕರ ನಾವು 'ಹಿಂಸೆಯನ್ನು ಬಿಟ್ಟು ದೂರ ಸರಿದರೆ ಮಾತ್ರ ಮಾನವರೆಂದು ಕರೆಸಿಕೊಳ್ಳುತ್ತೇವೆ'. ೧೯೩೨ರಲ್ಲಿ ಕಾನುನೂ ಭಂಗ ಚಳುವಳಿಯಲ್ಲಿ ದಿವಾಕರರು

ರೈತರಿಗೆ ತೆರಿಗೆ ಕೊಡಬಾರದೆಂದು ಹೇಳುತ್ತಾರೆ. ಇದಕ್ಕೆ ಶ್ರೀ ಮುಖರ್ಜಿಯವರು ಅದು ಪ್ರಗತಿಯಲ್ಲ ಎಂದು ಹೇಳುತ್ತಾರೆ. ದಿವಾಕರು ತಮ್ಮ ತತ್ವಗಳನ್ನು ಸದಾ ಎತ್ತಿ ಹಿಡಿಯುತಿದ್ದರು. ಕೆಲವು ಸಲ ವಾಸ್ತವ ಹಾಗೂ ಆದರ್ಶಗಳ ನಡುವಿನ ರೇಖೆಗಳನ್ನು ಹಾಳು ಮಾಡುತಿತ್ತು. ಆಗ ಅವರು ಸ್ವಾತಂತ್ರ್ಯ ಭಾರತವು ಅಹಿಂಸಾತ್ಮಕವಾಗಿರಬೇಕೆಂದು ಕರೆಕೊಟ್ಟಿದ್ದರು"[೨]

ದಿವಾಕರರ ಪ್ರಕಾರ ನೈತಿಕತೆಯು ವ್ಯಕ್ತಿ ಹಾಗೂ ಸಮುದಾಯಕ್ಕೆ ತಳಹದಿಯಾಗಬೇಕಾಗುತ್ತದೆ. ಹಾಗಾಗಿ ಅವರ ಬರವಣಿಗೆಯಲ್ಲಿ ೩ ಆದರ್ಶಗಳಿದ್ದು; ೧) ಅಸಾಧ್ಯವಾದ, ೨) ಆದರ್ಶವಾದ, ೩) ಸಾಧ್ಯವಾದ. ಆದರ್ಶವಾದ ಭಾರತೀಯ ಜನತೆಯ ಭಾವನೆ ವಾಸ್ತವಿಕ ಆದರ್ಶವಾಗಿದೆ. ಹೀಗೆ ದಿವಾಕರರು ತಮ್ಮ ರಾಜಕೀಯ ವಿಚಾರದಲ್ಲಿ ಗಾಂಧೀಜಿ ತತ್ವಗಳನ್ನು ಅಳವಡಿಸಿಕೊಂಡರು.

**ನೆಹರು ಹಾಗೂ ರಂಗನಾಥ ದಿವಾಕರರು:**

ದಿವಾಕರರು ೧೯೧೯ ರಿಂದ ನೆಹರು ಅವರ ಪ್ರಭಾವಕ್ಕೆ ಒಳಗಾದರಷ್ಟೆ ಇಂಗ್ಲೆಂಡಿನಲ್ಲಿ ಶಿಕ್ಷಣವನು ಪಡೆದ ತರುಣ ನೇಹರು, ರಾಜಕೀಯಕ್ಕೆ ಬರಲು ಗಾಂಧಿಜಿಯವರ ಉಪದೇಶವೇ ಮುಖ್ಯ ಕಾರಣವಾಯಿತ್ತು. ಗಾಂಧಿಜೀಯವರ ಕೂಗು ದೊಡ್ಡದು. ನೆಹರು ಹಾಗೂ ದಿವಾಕರರು ಪರಸ್ಪರ ವಿರೋಧ ಸ್ವಭಾವದವರು ಎನ್ನಬೇಕು. ಯಾಕೆಂದರೆ ನೆಹರುರವರು ಪ್ರತಿಭಾವಂತ ರೀತಿಯಲ್ಲಿ ಬದುಕಿದ್ದರೆ, ದಿವಾಕರರು ಸರಳವಾದ, ನಿರ್ಗಮಿಯಾದ ರೀತಿಯಲ್ಲಿ ಜೀವಿಸಿದ್ದಾರೆ. ನೆಹರುರವರು ದೇಶದ ಸ್ವಾತಂತ್ರ್ಯಕ್ಕಾಗಿ ಹಿಂಸೆಯನ್ನು ಬಳಸಿದ್ದರೆ, ದಿವಾಕರರು ಎಲ್ಲದಕ್ಕೂ ಅಹಿಂಸೆಯನ್ನು ಬಳಸಿದ್ದಾರೆ.

ನೆಹರು ಅವರು ಭಾರತಿಯರ ಕೌಟಂಬಿಕ, ಸಮಾಜಿಕ, ಧಾರ್ಮಿಕ, ರಾಜಕೀಯ ಈ ಎಲ್ಲಾ ವಿದ್ಯಾಮಾನಗಳ ಮೇಲೆ ಬೆಳಕು ಚಲ್ಲಿದ್ದಾರೆ. ದಿವಾಕರರು ವೈಭವಯುತವಾಧ ಪ್ರಾಚೀನ ಬದುಕು ಮನರ್ ಸ್ಥಾಪನೆ ಮಾಡಲು ಪ್ರಯತ್ನಿಸಿದ್ದಾರೆ.

ದಿವಾಕರರು ಹೇಳುವಂತೆ ಗ್ರಾಮೀಣ ಜೀವನದ ಏಳ್ಗೆಯೇ ಭಾರತದ ಎಳ್ಗೆಯಾಗಿದೆ. ಗ್ರಾಮೀಣರಿಗೆ ತಿಳಿ ಹೇಳಿ ಅವರ ಸರ್ವಾಂಗಿಣ ಪ್ರಗತಿಗೆ ಶ್ರಮಿಸಬೇಕು. ೧೯೨೯ರಲ್ಲಿ ದಿವಾಕರರು ಭಾಷಣ ಮಾಡುತ್ತ ಈ ದೇಶಕ್ಕೆ ಸ್ವಾತಂತ್ರ್ಯ ಹಾಗೂ ಅಭಿವೃದ್ಧಿಗೆ ನೆಹರು ಅವರ ಕೆಲಸ ತೀರ ಅಗತ್ಯ ಎಂದಿದ್ದಾರೆ. ನೆಹರುರವರು ಸ್ವಾತಂತ್ರ್ಯ "ಭಾರತದ ಶಿಲ್ಪಿಯಾದರೆ" ದಿವಾಕರರು "ಸ್ವಾತಂತ್ರ್ಯ ಕರ್ನಾಟಕ ಶಿಲ್ಪಿಯಾಗಿದ್ದಾರೆ". ಇಬ್ಬರು ಗಂಗಾ-ಯಮುನಾ ನದಿಗಳಂತಿದ್ದಾರೆ. ಹೀಗೆ ರಾಜಕೀಯ ವಿಚಾರದಲ್ಲಿ ನೆಹರು ಮತ್ತು ದಿವಾಕರರ ಸಂಬಂಧವಿದೆ ಎಂದು ಹೇಳಬಹುದು.

**ದಿವಾಕರರು ಹಾಗೂ ಅಸಹಕಾರ ಚಳುವಳಿ:**

"೧೯೧೯ರ ವೇಳೆ ಗಾಂಧಿಜೀಯವರು ಅಸಹಕಾರ ಚಳುವಳಿ ಆರಂಭಿಸಿದ್ದಾಗ ಕರ್ನಾಟಕ ಸ್ವಾತಂತ್ರಕ್ಕಾಗಿ ಉತ್ಕಟತೆಯನ್ನು ೧೯೧೯ರಲ್ಲಿ ಅಮೃತಸರದಲ್ಲಿ ಜರುಗಿ ಅಖಿಲ ಭಾರತ ಕಾಗ್ರೇಸ್ ಅಧಿವೇಶನ ಸಮ್ಮೇಳನಕ್ಕೆ ಕರ್ನಾಟಕದಿಂದ ಬಹು ದೊಡ್ಡ ಪ್ರಮಾಣದಲ್ಲಿ ಕಾರ್ಯಕರ್ತರು ಹೋಗಿದ್ದರು. ನಂತರ ೧೯೨೦ರಲ್ಲಿ ನಾಗಪೂರದಲ್ಲಿ ಜರುಗಿದ ಸಮ್ಮೇಳನಕ್ಕೆ ದೊಡ್ಡ ಜಾತ್ರೆಯೇ ನಡೆಯಿತು. ಗಾಧೀಜಿಯವರು ಸಾಬರಮತಿ ಆಶ್ರಮದಲ್ಲಿದ್ದು, ಸತ್ಯಾಗ್ರಹದ ಆದರ್ಶ ಸ್ವರೂಪ ಅರಿತರು. ಅವರ ನಂತರವು ಸರ್ವೋದಯ ಹಾಗೂ ಹರಿಜನರ ಉದ್ಧರಕಾಗಿ ಸೇವೆ ಸಲ್ಲಿಸಿದ್ದರು. ಅವರೊಂದಿಗೆ ಸೇರಿದ ಯುವಕರಲ್ಲಿ ರಂಗನಾಥ ದಿವಾಕರ, ವೀರಪ್ಪಾ ವಾಲಿ, ನೀಲಕಂಠಪ್ಪಾ ಸುಗಂಧಿ, ಚನ್ನಮಲ್ಲಪ್ಪಾ ಕೂರ್ಲೆ, ಡಾ॥ ಹರ್ಡೆಕರ್ ಹನುಮಂತರಾವ, ಕೌಜಲಗಿ ಹಣಮಂತರಾವ, ಮೊಹರೆ ಹಾಗೂ ಪರಮಣ್ಣಾ ಹೊಸಮನಿಯವರು ಪ್ರಮುಖರು. ಗಾಂಧಿಜೀಯವರು ಗುಜರಾತಿನಲ್ಲಿ ಬಾಡೋಲಿ ತಾಲ್ಲೂಕಿನ ತೆರಿಗೆ ಕಾನೂನು ಚಳುವಳಿಯನ್ನು ನಡೆಸಿದ್ದರು. ಕರ್ನಾಟಕದ ಜನತೆ ಗಾಂಧಿಜೀಯವರ ಆದರ್ಶವನ್ನು ವಾಸ್ತವಿಕರಣಗೊಳಿಸಲು ಕೆಲಸ ನಡೆಸಿದ್ದರು. ೧೯೨೧ರಲ್ಲಿ ಕರ್ನಾಟಕ ಪ್ರಾಂತಿಯ ಕಾಂಗ್ರೇಸ್ ಸಮಿತಿ ಅಸ್ತಿತ್ವಕ್ಕೆ ಬಂದಿತ್ತು. ಇಲ್ಲಿನ ವೃತ್ತ ಪತ್ರಿಕೆಗಳಾದ ಕರ್ಮವೀರ, ನವ ಶಕ್ತಿ, ಕರ್ನಾಟಕ ವೃತ್ತ ಪತ್ರಿಕೆ, ರಾಷ್ಟ್ರಬಂಧು, ವಿಶ್ವಕರ್ನಾಟಕ, ಶರಣ ಸಂದೇಶ ಪತ್ರಿಕೆಗಳು ಭಾರತದ ಸ್ವಾತಂತ್ರ್ಯ ಆಂದೋಲನಕ್ಕೆ ಬೆಂಬಲ ಮತ್ತು ಪ್ರೋತ್ಸಾಹ ನೀಡಿದವು"[೩೩]

ಬ್ರಿಟೀಷರು ಬೆಳೆಯುತ್ತಿರುವ ಸತ್ಯಾಗ್ರಾಹಿಗಳ ಭಾಷಣಗಳ ಮೇಲೆ ಕಣ್ಣಿಟ್ಟರು. ಆವಾಗ ಗಂಗಾಧರಾವ ದೇಶಪಾಂಡೆ ಆರು ತಿಂಗಳ ಸೆರಮನೆಗೆ ಹೋದರು. ಆದರೆ ದಿವಾಕರರು ಹನುಮಂತ ಮೋಹರೆ, ಹನುಮಂತರಾವ ಕೌಜಲಗಿ, ಒಂದೆರಡು ತಿಂಗಳು ಜೈಲಿಗೆ ಹೋದರು. ಈ ಸಂಧರ್ಭದಲ್ಲಿ ೩೦ ಜೂನ್ ೧೯೨೧ರಲ್ಲಿ ಸತ್ಯಾಗ್ರಾಹಿಗಳು ಧಾರವಾಡದಲ್ಲಿ ಸೆರೆ ಅಂಗಡಿಯ ವಿರುದ್ಧ ಪ್ರತಿಭಟಿಸುತಿದ್ದಾಗ ಪೊಲೀಸರು ಗೋಲಿಬಾರ್ ಮಾಡಿದರು. ಅದೇ ಸ್ಥಳದಲ್ಲಿ ಮೂವರು ಅಸುನಿಗಿದ್ದರು. ಅನೇಕರು ಗಾಯಗೊಂಡರು. ಕಾಂಗ್ರೆಸ್ ಸಮಿತಿಯು ಈ ಗೋಲಿಬಾರ ತಪ್ಪು ಎಂದು ಸಾಬಿತುಪಡಿಸುತ್ತಿದ್ದಾಗ, ಬ್ರಿಟಿಷ್ ಸರ್ಕಾರ ನಾಯಕರ ಮೇಲೆ ಸೆಡಿಶನ್ ಅಪಾದನೆಯನ್ನು ಹೊರಿಸಿದರು. ಅವರಲ್ಲಿ ೨೩ ಜನರಿಗೆ ವಿಭನ್ನ ರೀತಿಯ ಶಿಕ್ಷೆಯನ್ನು ವಿಧಿಸಲಾಯಿತು. ದಿವಾಕರರು ಈ ಅಪಾದಿತರಲ್ಲಿ ಒಬ್ಬರು. ೧೯೨೧ರಲ್ಲಿ ಕರ್ನಾಟಕದಲ್ಲಿ ಅನೇಕರು ಸ್ವದೇಶಿ ಹಡ್ತಲ್ ಆಚರಿಸಿ ಜೈಲಿಗೆ ಹೋದರು. ೧೯೨೩ರಲ್ಲಿ ಸೆರೆ ಅಂಗಡಿಯ ವಿರುದ್ಧ ಪೊಲೀಸರು ಗೋಲಿಬಾರ ಮಾಡಿದ್ದಾಗ ಮೂವರು ಸತ್ತರು. ಭಾರತ ಸ್ವಾತಂತ್ರ್ಯಕ್ಕಾಗಿ ನಡೆದ ಅಸಹಕಾರ ಚಳುವಳಿ ನಡೆದರೆ, ಇಲ್ಲಿ ಕರ್ನಾಟಕ ಸ್ವಾತಂತ್ರ್ಯಕ್ಕಾಗಿ ನಡೆದ ಚಳುವಳಿಯಲ್ಲಿ ದಿವಾಕರರ ಪಾತ್ರ

ಪ್ರಮುಖವಾಗಿದೆ. ಅವರು ಚಳುವಳಿ ನೇತಾರರಾಗಿ ಹಲವಾರು ಬಾರಿ ಜೈಲು ಶಿಕ್ಷೆ ಅನುಭವಿಸಿದ್ದರು. ಹೀಗೆ ದಿವಾಕರರು ಅಸಹಕಾರ ಚಳುವಳಿಯಲ್ಲಿ ಮಾಡಿದ ಸಾಧನೆ ಅಪಾರ ಮಹತ್ವದಾಗಿದೆ.

**ದಿವಾಕರರು ಹಾಗೂ ಸತ್ಯಾಗ್ರಹ ಚಳುವಳಿ:**

"ಆಗಿನ ಸತ್ಯಾಗ್ರಹ ಚಳುವಳಿಗಳು ಸತ್ಯ ಅಹಿಂಸೆಯಿಂದ ಕೂಡಿದ್ದು, ಆಳುವವರ, ಕೆಟ್ಟವರ, ಹೃದಯ ಪರಿವರ್ತನೆಗೆ ಪೂರಕವಾದವು. ೧೯೨೯ರಲ್ಲಿ ಜರುಗಿದ ಲಾಹೋರ ಸಮ್ಮೇಳನದ ನಂತರ ಗಾಂಧಿಜೀಯವರ ಸತ್ಯಾಗ್ರಹ ಚಳುವಳಿಗಳು ಹೊಸದಿಕ್ಕನ್ನು ಪಡೆದವು. ಕಾನೂನು ಭಂಗ ಚಳುವಳಿಗೆ ಪೂರಕವಾಗಿ ಉಪ್ಪಿನ ಸತ್ಯಾಗ್ರಹವನ್ನು ಹಮ್ಮಿಕೊಂಡರು. ಈ ಚಳುವಳಿಯಲ್ಲಿ ಎಲ್ಲಾ ಹೆಣ್ಣು ಮಕ್ಕಳು, ವೃದ್ಧರು ಭಾಗವಹಿಸಬಹುದಾಗಿತ್ತು. ಈ ಉಪ್ಪಿನ ಚಳುವಳಿಯ ಮೂಲ ಕರ್ನಾಟಕದಲ್ಲಿ ನಡೆಯಿತು. ಗಾಂಧಿಜೀಯವರ ದಂಢಿ ಉಪ್ಪಿನ ಸತ್ಯಾಗ್ರಹ ನಡೆದ ಒಂದು ವಾರದಲ್ಲಿ ಹುಬ್ಬಳ್ಳಿ ಬೆಳಗಾಂವದಿಂದ ಅಂತಹ ಮೊದಲ ಸತ್ಯಾಗ್ರಾಹಿಯಾಗಿದ್ದು, ಅವರು ಜನತೆಯ ಮುಂದೆ ಉಪ್ಪಿನ ನಿಯಮ ಮುರಿದು ಉಪ್ಪನ್ನು ತಯಾರಿಸಿದ್ದರು. ಕರ್ನಾಟಕ ಪ್ರದೇಶದ ಕಾಂಗ್ರೇಸ್ ಸಮಿತಿಯ ಅಧ್ಯಕ್ಷರಾದ ರಂಗನಾಥ ದಿವಾಕರರನ್ನು ಆರು ತಿಂಗಳ ಅವಧಿಗಾಗಿ ಸೆರೆಮನೆಗೆ ಕಳಿಸಲಾಯಿತು. ಇನ್ನು ಅಂಕೋಲಾದಲ್ಲಿ, ಮಲೆನಾಡಿನಲ್ಲೆಲ್ಲ ನಡೆದು ಅಲ್ಲಿ ಇರುವ ಉಪ್ಪಿನ ಭಂಡಾರಗಳ ಮೇಲೆ ದಾಳಿ ಮಾಡಿದರು. ಉಪ್ಪನ್ನು ತೆರಿಗೆ ಇಲ್ಲದೆ ಮಾರಲಾಯಿತು"[೩೪]

ಧಾರವಾಡ, ಬೆಳಗಾವಿ ಜಿಲ್ಲೆಗಳಲ್ಲಿಯ ಸೆಂಧಿ ಮರಗಳನ್ನು ಕಡಿದು ಹಾಕಲಾಯಿತು. ಬೆಳಗಾವಿ ಹಾಗೂ ಕಾರವಾರಗಳಲ್ಲಿ ಜನರು ಅಡವಿಯ ಉತ್ತಮ ಗಿಡಗಳನ್ನು ಕಡಿದು ಹಾಕಿದ್ದರು. ಈ ಅರಣ್ಯ ಚಳುವಳಿಯ ನೇತೃತ್ವವನ್ನು ವಹಿಸಿದವರು ಶ್ರೀ ಎನ್.ಬಿ. ಕಬ್ಬೂರರು. ಸಿರ್ಸಿಯಲ್ಲಿ ಈ ಚಳುವಳಿ ನಡೆದಾಗ ಎರಡು ಸಾವಿರ ಜನರು ಹರ್ಷದಿಂದ ಭಾಗವಹಿಸಿದ್ದರು. ಅರಣ್ಯ ಸತ್ಯಾಗ್ರಹ ನಂತರ ಬಂದದೆ ತೆರಿಗೆ ನಿರಾಕರಣೆ. ಸತ್ಯಾಗ್ರಹ ಈ ಚಳುವಳಿಯು ಅಂಕೋಲಾದಲ್ಲಿ ನಡೆದಾಗ ರಂಗನಾಥ ದಿವಾಕರರ ಕರ್ಮಕರ ರಾಬನಾಯಕ, ಬಸವಗೊಂಡ, ಕೃಷ್ಣಬಾಯಿ, ಪಣಜಿಕರರು ನಾಯಕತ್ವ ವಹಿಸಿದ್ದರು. ಕರ್ನಾಟಕದಿಂದ ಬಂದ ಕಾರ್ಯಕರ್ತರು ಬಹು ವ್ಯವಸ್ಥಿತವಾಗಿ ಈ ಕರ ನಿರಾಕರಣೆ ಸತ್ಯಾಗ್ರಹದಲ್ಲಿ ಭಾಗಿಯಾಗಿದ್ದರು. ಜನರಲ್ಲಿ ಒಗ್ಗೂಡಿಸಿ ಸರ್ಕಾರಕ್ಕೆ ಮುಖ ಭಂಗ ಮಾಡಿದ್ದು, ಒಂದು ವಿಶೇಷ ದಿವಾಕರರದಾಗಿದೆ. ನಾರಾಯಣ ಜೋಶಿ ಹಾಗೂ ಬಿ.ಎನ್. ದತ್ತರರು ಜನರಿಗೆ ಹುರುಪನ್ನು ನೀಡುತ್ತಿದ್ದರು. ಸಿರ್ಸಿ, ಸಿದ್ದಾಪೂರ ಬರಗಾಲ ವಿದ್ಧಕಾರಣ ಕರವನ್ನು ವಸೂಲಿ ಮಾಡಬಾರದೆಂದು ಮನವಿ ಸಲ್ಲಿಸಿದ್ದರು. ಆದರೆ ಸರ್ಕಾರ ಕೇಳಲಿಲ್ಲ. ಇದರಿಂದಾಗಿ

ಸತ್ಯಾಗ್ರಾಹಿಗಳು ತಮ್ಮ ಕರ ನಿರಾಕರಣೆ ಚಳುವಳಿಯನ್ನು ಉಗ್ರಹಗೊಳಿಸಿದ್ದರು. ಶ್ರೀ ವೀರನ್‌ಗೌಡ ಪಾಟೀಲ್‌ರ ನೇತೃತ್ವದಲ್ಲಿ ಹಿರೇಕೇರೂರಿನಲ್ಲಿ ಹಾಗೂ ದಿವಾಕರರು ಮತ್ತು ಕೆ.ಎ. ವೇಂಕಟರಾಮಯ್ಯನವರ ನೇತೃತ್ವದಲ್ಲಿ ಸಿರ್ಸಿ, ಸಿದ್ಧಾಪೂರಗಳಲ್ಲಿ ಚಳುವಳಿಯು ಮುಂದುವರಿಯುತು. ದಿವಾಕರರು ಮುಂಬೈಯಲ್ಲಿ ಸತ್ಯಾಗ್ರಹದ ತಯಾರಿಯನ್ನು ನಡೆಸಿದ್ದರು. ಆಗ ಅವರು ಅಲ್ಲಿಂದ ಬೆಳಗಾವಿಗೆ ಬರುವಾಗ ಅವರನ್ನು ಬಂದಿಸಿ ಹಿಂಡಲಗಿ ಜೈಲಿನಲ್ಲಿ ಇಡಲಾಯಿತು. ಆರೋಗ್ಯಕರವಾದ ಸ್ಥಿತಿ ಇರದೆ ಅಲ್ಲಿ ರೋಗಗಳು ಉಲ್ಬಣಗೊಂಡಾಗ ಸೆರಾಯಾಳುಗಳು ಗಲಭೆಯನ್ನುಂಟು ಮಾಡಿದ್ದರು. ಆ ಸಂದರ್ಭದಲ್ಲಿ ಅಧೀಕ್ಷಕ ಓರ್ವ, ಇಂಗ್ಲೀಷ್ ವ್ಯಕ್ತಿಯಾಗಿದ್ದು, ಆತ ಪೊಲೀಸ್ ಕಾರ್ಯಾಚರಣೆ ನಡೆಸಿದ್ದರು. ಆಗ ದಿವಾಕರರು, ನಾವು ಬ್ರಿಟೀಷರಿಗೆ ಭಾರತವನ್ನು ಬಿಟ್ಟು ತೊಲಗಿ ಎಂದು ಹೇಳಿದ್ದೆವು. ಅಂತೆಯೇ ನಾವು ನಮ್ಮ ಸ್ವಾತಂತ್ರ್ಯಕ್ಕಾಗಿ ಸಾಯಲು ಸಿದ್ಧವೆಂದು ಬಟ್ಟೆಯನ್ನು ಕಳೆದು ನಮಗೆ ಗುಂಡು ಹಾಕಿ ಎಂದರು. ಇದರಿಂದ ಭಯಭೀತರಾದ ಅಧೀಕ್ಷಕರು ಸೆರೆಮನೆಯ ಉಸ್ತುವಾರಿಯನ್ನು ಸುಧಾರಿಸಿಕೊಂಡರು.

ಬಂಧನದಿಂದ ಬಿಡುಗಡೆ ಹೊಂದಿದ ದಿವಾಕರರು ಈ ವರದಿಯನ್ನು ಆಗಾಖಾನ ಜೈಲಿನಲ್ಲಿದ್ದ ಗಾಂಧಿಜೀಯವರಿಗೆ ಈ ವರದಿಯನ್ನು ಕಳುಹಿಸಿದ್ದರು. ೧೯೪೨ ವೇಳೆಗೆ ೬೦,೨೩೦ ಜನರನ್ನು ಬಂಧಿಸಲಾಗಿತ್ತು. ೨೬ ಸಾವಿರ ಜನರ ಮೇಲೆ ಆರೋಪಗಳಿದ್ದವು. ಪೊಲೀಸ್‌ರು ಗೋಲಿಬಾರ ಮಾಡಿದ್ದಾಗ ೯೬೦ ಜನರು ಸತ್ತರು. ೧೯೪೫ ರಲ್ಲಿ ಶ್ರೀ ಮಹ್ಮದ ಅಲಿ ಜಿನ್ನಾ ಬೆಳಗಾವಿಗೆ ಬಂದಾಗ ದಿವಾಕರರು ಅವರನ್ನು ಭೇಟಿಯಾದರು. ದಿವಾಕರರು ಈ ಭಾಗದಲ್ಲಿ ಹಿಂದು–ಮುಸ್ಲಿಂರು ಸಾಮರಸ್ಯದಿಂದ ಬದಕುತಿದ್ದಾರೆ ಎಂದರು.

**ದಿವಾಕರರು ಹಾಗೂ ಭಾರತ ಬಿಟ್ಟು ತೊಲಗಿ ಚಳುವಳಿ:**

"೧೯೪೨ರಲ್ಲಿ ಕ್ರೀಪ್ಸ್ ಸಮಿತಿಯ ಭಾರತದ ಭೇಟಿ ವಿಫಲವಾದಾಗ ಗಾಂಧಿಜೀಯವರು ಬ್ರಿಟಿಷರು ತೊಲುಗುವಿಕೆ ಬಗ್ಗೆ ಯೋಚಿಸಿದ್ದರು. ೧೯೪೨ರ ಅಗಸ್ಟ ೮, ೯ ರಂದು ಕಾಂಗ್ರೆಸ್ ಪಕ್ಷವು ಬ್ರಿಟೀಷರನ್ನು ಭಾರತವನ್ನು ಬಿಟ್ಟು ತೊಲುಗುವದರಿಂದ ಅವರಿಗೂ ಒಳ್ಳೆಯದು ಹಾಗೂ ನಮ್ಮಗೂ ಒಳ್ಳೆಯದು ಎಂದು ನಿರ್ಣಯ ಪಾಸು ಮಾಡಿದ್ದರು. ಗಾಂಧೀಜಿಯವರು ತಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ ಅಹಿಂಸಾತ್ಮಕವಾದ ಸತ್ಯಾಗ್ರಹವನ್ನು ಮುಂದುವರಿಸಬೇಕು. ಅವರು "ಮಾಡಬೇಕು ಇಲ್ಲವೇ ಮಡಿಯಬೇಕು" ಎಂದು ಕರೆಕೊಟ್ಟರು. ಸರ್ಕಾರವು ಕಾಂಗ್ರೇಸ್ಸಿನ ಈ ನಿರ್ಣಯದಿಂದ ಬಾಧಿತರಾಗಿ ಎಲ್ಲಾ ಕಾಂಗ್ರೇಸ್‌ರನ್ನು ಬಂಧಿಸಿತ್ತು. ಇದರಿಂದ ಗಾಂಧೀಜಿಯವರು ಹಿರಿಯನ್ ಪತ್ರಿಕೆಯ ತಾತ್ಕಾಲಿಕ ಸಂಪಾದಕ ಕಿಶೋರಲಾಲ ಮಸ್ರೂವಾಲರು ಅಹಿಂಸಾತ್ಮವಾಗಿ ಏನು ಬೇಕಾದರು ಮಾಡಿ ಎಂದು ಕರೆ ಕೊಟ್ಟರು.

ಆಗ ಇನ್ನು ಮುಂಬೈಯಲ್ಲಿದ್ದ ಕಾಂಗ್ರೇಸ್ ನೌಕರರಾದ ದಿವಾಕರರು, ವೀರನಗೌಡ ಪಾಟೀಲ್, ಆರ್.ಎಸ್. ಹುಕ್ಕೇರಿಕರ್, ಎಮ್.ಪಿ. ಪಾಟೀಲ್ ಡಿ.ಪಿ. ಕರ್ಮಕರರು ಸೇರಿಕೊಂಡು ಕಿಶೋರಲಾಲರ ಸಂದೇಶವನ್ನು ಎಲ್ಲಾ ಕಡೆ ರವಾನಿಸಿದ್ದರು. ಹೀಗೆ ಮುಖ್ಯ ನಾಯಕರು ಭೂಗತವಾಗಿ ಎಲ್ಲಡೆಯು ಈ ಚಳುವಳಿಗೆ ಬೆಂಬಲ ನೀಡಿದ್ದರು[೨೬]

ಈ ಚಳುವಳಿಯ ಪ್ರಭಾವವು ದೇಶದ ಎಲ್ಲಾ ಕಡೆ ಪ್ರಭಾವ ಬೀರಿತ್ತು. ಅದು ವಿಶೇಷವಾಗಿ ಕರ್ನಾಟಕದ ಮೈಸೂರು ರಾಜ್ಯದಲ್ಲಿ ದೊಡ್ಡ ಪ್ರಮಾಣ ಹರತಾಳಗಳು ನಡೆದವು. ಬೆಂಗಳೂರಿನಲ್ಲಿ ಅನೇಕ ಸಲ ಗೋಲಿಬಾರ ನಡೆದವು. ಈ ಕಾಲಕ್ಕೆ ೧೪ ವರ್ಷ ಬಾಲಕನನ್ನು ಪೊಲೀಸರು ಹುಬ್ಬಳಿಯಲ್ಲಿ ಗೋಲಿಬಾರದಿಂದ ಸಾಯಿಸಿದ್ದರು. ಆವಾಗ ಬ್ರಿಟಿಷರ ವಿರುದ್ಧ ಚಳುವಳಿ ಪ್ರಾರಂಭವಾಯಿತ್ತು. ಆ ಸಂದರ್ಭದಲ್ಲಿ ಬ್ರಿಟೀಷರು ೧೯೪೨ರ ಭಾರತದ ಚಳುವಳಿಯಲ್ಲಿ ದಿವಾಕರರ ಪಾತ್ರವು ಅತಿ ಪ್ರಮುಖವೆಂದು ಭಾವಿಸಿ, ದಿವಾಕರರ ಮೇಲೆ ಕಂಡಲ್ಲಿ ಗುಂಡಿಕ್ಕುವ ಆಜ್ಞೆ ಹೊರಡಿಸಲಾಯಿತು. ಮೇಲಾಗಿ ಅವರ ಬಂಧನಕ್ಕೆ ರೂ. ೫,೦೦೦/- ಸಾವಿರ ಬಹುಮಾನ ಪೊಲೀಸರು ಘೋಷಿಸಿದ್ದರು. ಅವರ ಕಣ್ಣಿಗೆ ಮಣ್ಣೆರೆಚ್ಚುವ ವೇಶಬದಲಿಸಿ ಊರಿಂದ ಊರಿಗೆ ಧಾವಿಸುತ್ತ ಸಂಘಟನೆ ಮಾಡುವ ಕಾರ್ಯ ಮಾಡಿದ ಅವರ ಸಾಹಸ ಅದ್ವಿತೀಯವಾಗಿತ್ತು. ಇವರು ಸೆರೆ ಮನೆಯಲ್ಲಿ ಸೇರಿದ್ದಾಗ ಇವರ ಕಾರ್ಯಕರ್ತರು ವೈಯಕ್ತಿಕ ಚಳುವಳಿಯನ್ನು ಆರಂಭಿಸಿದ್ದರು.

ಹೀಗೆ ಭಾರತ ಬಿಟ್ಟು ತೊಲಗಿ ಚಳುವಳಿ ಕರ್ನಾಟಕದ ಮೇಲೆ ಪ್ರಭಾವವನ್ನು ಬೀರಿ ಕೆಲವು ನಾಯಕರು ಹಾಗೂ ಅವರ ವಿಚಾರಗಳನ್ನು ಇಲ್ಲಿ ಸ್ಮರಿಸಿಕೊಳ್ಳಲಾಗಿದೆ. ಅಂತಹವರಲ್ಲಿ ಆರ್. ದಿವಾಕರರು ಒಬ್ಬರು.

**ಮರಣ:**

ಶ್ರೀ ರಂಗನಾಥ ದಿವಾಕರರು ದಿನಾಂಕ:೧೫.೦೧.೧೯೯೦ ರಂದು ಬೆಳಗಾವಿಯಲ್ಲಿ ನಿಧನ ಹೊಂದಿದ್ದರು. ಅವರ ಪಾರ್ಥೀವ ಶರೀರ ಹರಿಚಂದ್ರ ಘಾಟಿಗೆ ಒಯ್ದಾಗ ರಾಜ್ಯದ ರಾಜ್ಯಪಾಲರು ಶ್ರೀ ವೇಂಕಟ ಸುಬ್ಬಯ್ಯಾನವರು ಪುಷ್ಪಗುಚ್ಛವನ್ನು ಇರಿಸಿದರು.

**ಶ್ರೀ ರಂಗನಾಥ ದಿವಾಕರರಿಗೆ ಸಂಘ ಗೌರವ:**

"ಮಾನವ ಜೀವನ ಅಶಾಸ್ವತವಲ್ಲದೆ ಅಂತೆಯೇ ಎಷ್ಟೋ ಏಳೆದರು, ಬದಲಾದರು ನಾವು ಒಂದು ದಿನ ಅಂತ್ಯವಾಗುತ್ತೇವೆ. ನಮ್ಮೆಲ್ಲರ ಹಿರಿಯರ ಚೇತನ ಶ್ರೀ ರಂಗನಾಥ ದಿವಾಕರವರ ನಿಧನದಿಂದ ಇಂದು ಭಾರತ ಹಾಗೂ ಕರ್ನಾಟಕದ

ಇತಿಹಾಸದಲ್ಲಿ ಕರಾಳ ದಿನವಾಗಿತ್ತು. ಅವರ ನಿಧನದ ಬಗ್ಗೆ ಇಡೀ ಭಾರತವೇ ಶೋಕವ್ಯಕ್ತಪಡಿಸಿತ್ತು. ಕರ್ನಾಟಕ ರಾಜ್ಯದ ವೃತ್ತ ಪತ್ರಿಕೆಗಳಾದ ಡೆಕ್ಕನ್ ಹೆರಾಲ್ಡ್, ಇಂಡಿಯನ್ ಎಕ್ಸಪ್ರೇಸ್, ದ ಹಿಂದೂ, ಸಂಯುಕ್ತ ಕರ್ನಾಟಕ ಮುಂತಾದ ಪತ್ರಿಕೆಗಳು ದಿವಾಕರರನ್ನು ಕುರಿತು ಲೇಖನ ಪ್ರಕಟಿಸಿದ್ದವು. ಅಂದಿನ "ರಾಷ್ಟ್ರಪತಿ ಡಾ॥ ವೇಂಕಟರಾಮನ್" ರವರು ಶೋಕದಲ್ಲಿ ನಾವಿಂದು ಭಾರತದ ಸ್ವಾತಂತ್ರ್ಯ ಹೋರಾಟಗಾರ ಗಾಂಧಿಜೀಯವರ ಅನುಯಾಯಿ ರಂಗನಾಥ ದಿವಾಕರರನ್ನು ಕಳೆದುಕೊಂಡು ಒಂದಿಷ್ಟು ಬಡವರಾದೆವು. "ಡಾ॥ ಶಂಕರ ದಯಾಳ್ ಶರ್ಮಾ" ಇವರು ಉಪರಾಷ್ಟ್ರಪತಿಯಾಗಿದ್ದರು, ದಿವಾಕರರು ಗಾಂಧಿ ಯುಗದ ಶ್ರೇಷ್ಠ ವ್ಯಕ್ತಿಗಳಾಗಿದ್ದರೆಂದು ಅವರ ಮರಣದಿಂದ ನಾವು ಬಡವರಾದೇವು"[೩೭]

ಡಾ॥ ಶ್ರೀ ಪಿ. ಉಪೇಂದ್ರ, ಕೇಂದ್ರ ಮಾಹಿತಿ ಹಾಗೂ ಪ್ರಸಾರ ಖಾತೆಯ ಮಂತ್ರಿ ಇವರು ದಿವಾಕರರ ಮರಣದ ಬಗ್ಗೆ ಸಂದೇಶ ಕಳುಹಿಸಿದ್ದರು.

ಹೀಗೆ ದಿವಾಕರರ ಮರಣದ ಕುರಿತು ಹಲವಾರು ಸಂಪನ್ಮೂಲ ವ್ಯಕ್ತಿಗಳು ಅವರ ಕುರಿತು ಶೋಕವನ್ನು ವ್ಯಕ್ತಪಡಿಸಿದ್ದಾರೆ.

**ವ್ಯಕ್ತಿತ್ವ:**

ಶ್ರೀ ರಂಗನಾಥ ದಿವಾಕರರು ಭಾರತದ ಸ್ವಾತಂತ್ರ್ಯ ಹೋರಾಟಗಾರರು, ಗಾಂಧಿವಾದಿಗಳು, ಕರ್ನಾಟಕ ಏಕೀಕರಣ ರೂವಾರಿಗಳು ಹಾಗೂ ಪತ್ರಿಕಾ ಉದ್ಯಮಿಗಳೆಂಬುವದು ಗಮನಾರ್ಹ.

ರಂಗನಾಥ ದಿವಾಕರರು ಕರ್ನಾಟಕದ ಏಕೀಕರಣದ ರೂವಾರಿಯಾಗಿದ್ದು, ಅವರು ಈ ಕನ್ನಡ ನಾಡಿನ ಏಕೀಕರಣವನ್ನು ಭಾಷಾ ತತ್ವದ ಆಧಾರದ ಮೇಲೆ ಸಫಲಗೋಳಿಸಿದ್ದರು. ಭಾಷಾಧಾರಿತ ರಾಜ್ಯ ವಿಂಗಡಣೆಯನ್ನು ಫಜಲ್ ಅಲಿ ಕಮೀಷನ್ ವರದಿಯನ್ನು ಆಧರಿಸಿ ಮಾಡಲಾಯಿತು. ಇವರು ತಮ್ಮ ಸರಳ ಜೀವನದಲ್ಲಿ ಗಾಂಧಿಯ ತತ್ವ ಅಳವಡಿಸಿಕೊಂಡು ೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ಭಾರತೀಯ ರಾಷ್ಟ್ರೀಯ ಕಾಂಗ್ರೇಸ್ ಅಧಿವೇಶನ ಪ್ರೋತ್ಸಾಹಿಸಿದೆ.

ದಿವಾಕರರು ಕರ್ನಾಟಕ ಏಕೀರಣಕ್ಕಾಗಿ ಕೆಲಸ ಮಾಡಿದ ಸಂಧರ್ಭದಲ್ಲಿ ಕರ್ನಾಟಕವು ಮುಂಬೈಯ ಕರ್ನಾಟಕ, ಮದ್ರಾಸ ಕರ್ನಾಟಕ, ಮೈಸೂರ ರಾಜ್ಯ ಹೈದ್ರಬಾದ ಕರ್ನಾಟಕ, ಹಾಗೂ ಕೊಡಗು ರಾಜ್ಯಗಳಿಗೆ ಹಂಚಿ ಹೋಗಿತ್ತು. ಈ ಹಿನ್ನಲೆಯಲ್ಲಿ ಭಾರತ ರಾಷ್ಟ್ರೀಯ ಹಿನ್ನಲೆ ಬಹಳ ಮುಖ್ಯ. ೧೯೨೦ರಲ್ಲಿ ಅಖಿಲ

ಭಾರತೀಯ ಕಾಂಗ್ರೇಸ್ ಅಧಿವೇಷನ ನಾಗಪೂರದಲ್ಲಿ ದಿವಾಕರರೆ. ಅದರ ಅಧ್ಯಕ್ಷತೆ ವಹಿಸಿಕೊಂಡರು.

ಭಾರತದಲ್ಲಿ ನೆಹರು/ದಿವಾಕರರ ಯುಗ ಮುಗಿದರೂ, ಈ ದೇಶ ಸುಭದ್ರವಾಗಿ ಉಳಿಯಲಿದೆ. ಅದಕ್ಕಾಗಿ ಇಲ್ಲಿಯ ನಾಗರೀಕ ಸೇವೆ ಹಾಗೂ ಪ್ರಜಾಪ್ರಭುತ್ವ ಸರ್ಕಾರ ಉತ್ತಮ ಸೇವೆ ನೀಡಬೇಕಷ್ಟೆ. ಅಮೇರಿಕದ ಪ್ರಜಾಪ್ರಭುತ್ವ ಸರ್ಕಾರ ತೋರಿಸಿದಂತೆ ಭಾರತ ಪ್ರಜಾಪ್ರಭುತ್ವ ಸರ್ಕಾರದಲ್ಲೂ ಪ್ರಗತಿ ಶಾಂತಿ ಸಹ ಬಾಳ್ವೆ ಸಾಧ್ಯವಾಗಲಿದೆ. ಈ ದಿಶೇಯಲ್ಲಿ ತಿಲಕರ ನುಡಿ "ಸ್ವರಾಜ್ಯ ನಮ್ಮ ಜನ್ಮ ಸಿದ್ಧ ಹಕ್ಕು" ಹಾಗೂ ಗಾಂಧಿಜಿಯವರ ದೇಶದ ಕಲ್ಪನೆ, ದೇಶದ ಚಿಂತನೆ ಪ್ರಕಟವಾದವು. ಈ ಹಿನ್ನಲೆಯಲ್ಲಿ ದಿವಾಕರರು ಕರ್ನಾಟಕ ಚರಿತ್ರೆಗೆ ಹಾಗೂ ಭಾರತ ದೇಶಕ್ಕೆ ಸೇವೆ ಸಲ್ಲಿಸಿದ್ದು, ಅದ್ವಿತಿಯವಾದುದೆಂಬುದು ಗಮನಾರ್ಹ. ಇವರು ಕರ್ನಾಟಕ ನಾಡಿಗಾಗಿ ದುಡಿದ ಮಹಾನ್ ನೇತಾರ ದಿವಾಕರರ ಹೆಸರು ಕನ್ನಡಿಗರ ನರನಾಡಿಯಲ್ಲಿ ಇದೆ ಎಂದು ಹೇಳುತ್ತೇನೆ.

**

## ೯. ಎಸ್. ಲಕ್ಷ್ಮೀನಾರಾಣರಾಯರು ಕ್ರಿ.ಶ.೧೮೯೮-೧೯೭೯

**ಪರಿಚಯ:**

ಎನ್. ಲಕ್ಷ್ಮೀನಾರಾಯಣರಾಯರು ಕರ್ನಾಟಕ ಚರಿತ್ರೆಕಾರರಲ್ಲಿ ಇವರು ಒಬ್ಬರು. ಇವರು ತಾವು ಅಧ್ಯಯನ ಮಾಡುವುದರ ಮೂಲಕ ಕರ್ನಾಟಕ ಚರಿತ್ರೆಗೆ ಸಲ್ಲಿಸಿದ ಸೇವೆ ಅಪಾರವಾದದ್ದು. ಇವರು ಮಾಡಿದ ಸಾಧನೆ ಚಿರಸ್ಮರಣೀಯವಾಗಿದೆ.

**ಜನನ :**

ಇವರು ಸುಬ್ಬಣ್ಣ ಮತ್ತು ಲಕ್ಷ್ಮೀದೇವಮ್ಮರವರ ಮಗನಾಗಿ ೧೮೯೮ರ ಮೇ ೧೫ರಂದು ಜನಿಸಿದರು.

**ಶಿಕ್ಷಣ :**

ಎನ್. ಲಕ್ಷ್ಮೀನಾರಾಯಣರಾಯರವರು ತಮ್ಮ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲಾ ಅಭ್ಯಾಸವನ್ನು ಚಿಕ್ಕಬಳ್ಳಾಪೂರದಲ್ಲಿ ಮುಗಿಸಿದ್ದರು. ನಂತರ ಇವರು ಬೆಂಗಳೂರುನಲ್ಲಿ ಹೆಚ್ಚಿನ ಶಿಕ್ಷಣವನ್ನು ಪಡೆದುಕೊಂಡರು.

**ಎನ್. ಲಕ್ಷ್ಮೀನಾರಾಯಣರಾಯರ ಸೇವೆ ಮತ್ತು ಸಾಧನೆ :**

"ಇವರು ಭಾರತೀಯ ಪುರಾತತ್ವ ಅನ್ವೇಷಣಾ ಇಲಾಖೆಯ ಅಂಗವಾದ ಶಾಸನಶಾಸ್ತ್ರ ವಿಭಾಗದಲ್ಲಿ ೧೯೨೧ ರಲ್ಲಿ ಕನ್ನಡ ಸಹಾಯಕರಾಗಿ ನೌಕರಿಗೆ ಸೇರಿದರು. ಇವರು ತಮ್ಮ ಖಾತೆಯಲ್ಲಿ ಸಹಾಯಕ ಸೂಪರಿಂಟೆಂಡೆಂಟರಾಗಿ ಮುಂದೆ ಭಾರತ ಸರ್ಕಾರದ ಅತ್ಯುತ್ತಮ ಶಾಸನ ತಜ್ಞರಾಗಿ ೧೯೫೭ ರಲ್ಲಿ ಸೇವಾ ನಿವೃತ್ತಿ ಹೊಂದಿದರು. ನಂತರ ಇವರು ಧಾರವಾಡ ತಾಲ್ಲೂಕಿನ ಶಾಸನಗಳನ್ನು ನಕಲು ಮಾಡಲು ಪ್ರಾರಂಭಿಸಿ ೧೩ ಊರುಗಳನ್ನು ಸಂದರ್ಶಿಸಿ ೮ ಶಾಸನಗಳನು ನಕಲು ಮಾಡಿಕೊಂಡರು. ಪಂಚಮುಖಿಯವರು ಇವರಿಗೆ ಶಾಸನ ನಕಲು ಮಾಡುವ ಪದ್ಧತಿಯನು ಕಲಿಸಿದ್ದರು. ಇವರು ದಕ್ಷಿಣ ಭಾರತ ಶಾಸನ ಮಾಲೆಯ ೫ ಸಂಪುಟಗಳನ್ನು ೧೯೪೯-೧೯೫೦ರ ವರೆಗಿನ ದಕ್ಷಿಣ ಭಾರತ ಶಾಸನಶಾಸ್ತ್ರ ವಿಭಾಗದ ವಾರ್ಷಿಕ ವರದಿಗಳನ್ನು ಮತ್ತು ಎಫಿಗ್ರಾಫಿಯಾ ಇಂಡಿಕಾದ ಕೆಲವು ಭಾಗಗಳನ್ನು ಸಂಪಾದಿಸಿದರು"[೫೮]

ಇವರು ಸುಮಾರು ೫೦ ಸಂಶೋಧನಾ ಲೇಖನಗಳನ್ನು ಪ್ರಕಟಿಸಿದ್ದಾರೆ. ಆರ್. ಎಸ್. ಪಂಚಮುಖಿ ಯವರೊಂದಿಗೆ ಸೇರಿ "ಅರಸು ಮನೆತನಗಳು" ಎಂಬ ಗ್ರಂಥವನ್ನು ಬರೆದಿದ್ದಾರೆ[೫೯].

ಈ ಗ್ರಂಥವು ಅತ್ಯಂತ ಪ್ರಮುಖವಾದ ಗ್ರಂಥ. ಇದರಲ್ಲಿ ಕರ್ನಾಟಕ ರಾಜ ಮನೆತನಗಳಾದ 'ಕದಂಬರು', 'ಬಾದಮಿಯ ಚಾಲುಕ್ಯರು', 'ರಾಷ್ಟ್ರಕೂಟರು', 'ನೊಳಂಬರು' ಮತ್ತು 'ಬಾಣರು' ಎಂಬ ಮನೆತನಗಳ ಸಂಕ್ಷಿಪ್ತ ಚರಿತ್ರೆ ಬರೆದಿದ್ದಾರೆ.

ಇವರು ಮಹಾರಾಷ್ಟ್ರ ಗ್ಯಾಝಟೀಯರಿಗೆ ಬಾದಮಿ ಚಾಲುಕ್ಯರನ್ನು ಕುರಿತು ಒಂದು ಸುಧೀರ್ಘವಾದ ಲೇಖನ ಬರೆದಿದ್ದಾರೆ. ಮತ್ತು ಅದರಲ್ಲಿ ಚಾಲುಕ್ಯ ಮನೆತನದವರು ಕನ್ನಡಿಗರಾಗಿದ್ದಾರೆಂದು ತೋರಿಸಿದ್ದಾರೆ. ಆ ಮನೆತನ, ರಾಜರ ಹೆಸರುಗಳಾದ ಪುಲಿಕೇಶಿ, ಬಿಟ್ಟರಸ್ ಇವೆಲ್ಲವು ಕನ್ನಡ ಶಬ್ದಗಳೆಂದು ಹೇಳಿರುವರು.

ಲಕ್ಷ್ಮೀನಾರಾಯಣರಾಯರು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸುತ್ತಿದ್ದ ಕನ್ನಡ ನಿಘಂಟುವಿನ ಕಾರ್ಯದಲ್ಲಿಯೂ ಸೇವೆ ಸಲ್ಲಿಸಿದ್ದಾರೆ.

ಶಾಸನಗಳ ಅಭ್ಯಾಸವು ಅವರಿಗೆ ವಿಶೇಷ ಖ್ಯಾತಿಯನ್ನು ತಂದುಕೊಟ್ಟಿತ್ತು. ಶಾಸನಗಳಿಗೆ ಸಂಬಂಧಿಸಿದ ಹಲವು ವಿವಾದಾತ್ಮಕ ವಿಷಯಗಳಲ್ಲಿ ಬಹುಮಟ್ಟಿಗೆ ಅವರ ಅಭಿಪ್ರಾಯವೇ ಕೊನೆಯದೆಂದು ಮೀಥಿಕ ಸಂಸ್ಥೆಯು ತನ್ನ ವಜ್ರ ಮಹೋತ್ಸವದ ಕಾಲಕ್ಕೆ ೧೯೭೩ರಲ್ಲಿ ಗೌರವಿಸಲಾಗಿತ್ತು. ನಂತರ ೧೯೭೫ ರಲ್ಲಿ ಧಾರವಾಡದಲ್ಲಿ ನಡೆದ ಭಾರತೀಯ ಪುರಾತತ್ವ ಲೇಖನ ಸಂಸ್ಥೆಯಲ್ಲಿ ಇವರಿಗೆ ತಾಮ್ರ ಪ್ರಶಸ್ತಿಕೊಟ್ಟು ಗೌರವಿಸಿತು.

"ಅವರು ಎಫಿಗ್ರಾಫಿಯಾ ಇಂಡಿಕಾ ಹಾಗೂ ಮಥಿಕ್ ಸೊಸಾಯಿಟಿಯ ಲೇಖನಗಳನ್ನು ಬರೆದರು"[೪೦]

**ಮರಣ :**

ಎಸ್. ಲಕ್ಷ್ಮೀನಾರಾಯಣರಾಯರವರು ೧೯೭೮ ಜನವರಿ ೧೪ ರಂದು ಕೊಲ್ಲಾಪೂರದಲ್ಲಿ ಮರಣ ಹೊಂದಿದ್ದರು. ಇವರ ಮರಣದಿಂದ ಕರ್ನಾಟಕ ಚರಿತ್ರೆಗೆ ಅಪಾರ ಹಾನಿಯುಂಟಾಯಿತ್ತು.

**ವ್ಯಕ್ತಿತ್ವ :**

ಲಕ್ಷ್ಮೀನಾರಾಯಣರಾಯರು ಇತಿಹಾಸ ತಜ್ಞರಾಗಿ, ಶಾಸನ ತಜ್ಞರಾಗಿ ಪ್ರಮುಖವಾಗಿ ಕಾರ್ಯನಿರ್ವಹಿಸಿದ್ದಾರೆ. ಇವರಿಗೆ ನಾಣ್ಯಶಾಸ್ತ್ರದಲ್ಲಿ ಹೆಚ್ಚಿನ ಆಸಕ್ತಿ ಇದಿತ್ತೆಂದು ತಿಳಿಯಬಹುದಾಗಿದೆ. ಇವರು ವಿಮರ್ಶಕ ಮತ್ತು ಸಾಹಿತ್ಯ ಪ್ರೇಮಿ ವ್ಯಕ್ತಿಯಾಗಿದ್ದಾರೆ. ಇವರು ಮಾಡಿದ ಸಾಧನೆಯನ್ನು ಮೆಚ್ಚಿ ಕರ್ನಾಟಕ ಜನತೆಯು ಇವರನ್ನು ತಮ್ಮ ಮನದಾಳದಲ್ಲಿ ಇಟ್ಟುಕೊಡಿದ್ದಾರೆ.

**

## ೧೦. ಆರ್.ಎಸ್. ಪಂಚಮುಖಿ ಕ್ರಿಶ.೧೮೯೮-೧೯೮೨

**ಪರಿಚಯ :**

ಆರ್.ಎಸ್. ಪಂಚಮುಖಿಯವರು ಕರ್ನಾಟಕ ಇತಿಹಾಸಕಾರರಲ್ಲಿ ಒಬ್ಬರು. ಇವರು ಕರ್ನಾಟಕ ಚರಿತ್ರೆಗೆ ಸಲ್ಲಿಸಿದ ಸೇವೆಯು ಅಪಾರವಾಗಿದೆ. ಹಾಗೂ ಇವರು ಕರ್ನಾಟಕ ರಾಜಮನೆತನಗಳ ಕುರಿತು ಹಲವಾರು ಗ್ರಂಥಗಳನ್ನು ರಚಿಸಿ, ಅವರ ಸ್ಥಿತಿಗಳ ಬಗ್ಗೆ ಅಧ್ಯಯನ ಮಾಡಿದ ಒಬ್ಬ ಪ್ರಮುಖ ಇತಿಹಾಸಕಾರರಾಗಿ ಹೊರಹೊಮ್ಮಿದ್ದಾರೆ.

**ಜನನ :**

ರಾಘವೇಂದ್ರಾಚಾರ್ಯ ಸ್ವಾಮಿ ರಾಮಚಾರ್ಯ ಪಂಚಮುಖಿಯವರು ಸ್ವಾಮಿ ರಾಯಚಾರ್ಯ ಮತ್ತು ಸಾವಿತ್ರಿಬಾಯಿ ರವರ ಮಗನಾಗಿ ೧೮೯೮ ರ ಮೇ ೪ ರಂದು ಜನಿಸಿದರು.

**ಶಿಕ್ಷಣ :**

"ಇವರ ಪ್ರಾಥಮಿಕ ಶಿಕ್ಷಣ ಜಾಲೀಹಾಳದಲ್ಲಿ ಮತ್ತು ಮಾಧ್ಯಮಿಕ ಅಭ್ಯಾಸವು ಬಾಗಲಕೋಟೆ ಮತ್ತು ಧಾರವಾಡದ ವಿಕ್ಟೋರಿಯಾ ಹೈಸ್ಕೂಲುದಲ್ಲಿ ನಡೆಯಿತು. ೧೯೨೩ ರಲ್ಲಿ ಬಿ.ಎ. ಪಾಸಾದರು. ಇದರಿಂದ ಅವರಿಗೆ ದೀಪದ ಬಂಗಾರದ ಪದಕ ಮತ್ತು ಎರಡು ವರ್ಷಗಳವರೆಗೆ ದಕ್ಷಿಣ ಫಿಲೋಶಿಪ್ ಆಗುವ ಸಂದರ್ಭ ದೊರಕಿತು. ೧೯೨೫ ರಲ್ಲಿ ಎಂ.ಎ. ಪಾಸಾದರು. ೧೯೨೫ ರಲ್ಲಿ ಭಾರತೀಯ ಪ್ರಾಕ್ತನ ಶಾಸ್ತ್ರ ಇಲಾಖೆಯ ಶಾಸನಶಾಸ್ತ್ರ ವಿಭಾಗದಲ್ಲಿ ನೌಕರಿಗೆ ಸೇರಿದರು. ಅಲ್ಲದೆ ಅವರು ಶಾಸನಗಳ ಪ್ರತಿಗಳನ್ನು ಮಾಡಿ ನಕಲು ಮಾಡುವ ಕೆಲಸ ಆರಂಭಿಸಿದರು"[೪೧].

**ಕೃತಿಗಳು :**

"ಆರ್.ಎಸ್. ಪಂಚಮುಖಿಯವರು ಭಾಷಾ ತಜ್ಞರಾಗಿ, ಇತಿಹಾಸಕಾರರಾಗಿ ಇವರು ಸಾಹಿತ್ಯ ಕ್ಷೇತ್ರದಲ್ಲಿ ಕೂಡ ಗಣನೀಯವಾದ ಸಾಧನೆ ಮಾಡಿದ್ದಾರೆ. ಇವರ ಕೃತಿಗಳು ಈ ಕೆಳಗಿನಂತಿವೆ.

- ಶ್ರೀ ರಾಘವೇಂದ್ರ ತೀರ್ಥರ ತಂತ್ರ ದೀಪಿಕಾ.
- ವೇದಪೌರುಷ್ಯವದಾ
- ಶ್ರೀ ರಾಘವೇಂದ್ರ ಗುರು ಸಾರ್ವಭೌಮ ಸಪ್ತರಥೋತ್ಸವ ಚಂಪು.
- ಕರ್ನಾಟಕದ ಇತಿಹಾಸ ಸಂಪುಟ.
- ಸಂಸ್ಕೃತಿ ವಿಹಾರ

- ಸಂಸ್ಕೃತಿ ಸಂಗ್ರಾಮ
- ಕರ್ನಾಟಕದ ಅರಸು ಮನೆತನಗಳು.
- ಆನ್ ಔಟ್ ಲೈನ್ ಆಫ್ ಕರ್ನಾಟಕ
- ಕಾಂಟರ್‌ಬ್ಯೂಷನ್ ಟು ಇನಾಲೋಜಿ
- ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ದಿ ಆರ‍್ಯ ಸಂಸ್ಕೃತಿ ಅ್ಯಂಡ್ ಕನ್ನಡ.
- ಸ್ಕೂಲ್ ಆಫ್ ಇಂಡಿಯನ್ ಪಾಲಿಯೊಗ್ರಾಫಿ
- ಹಿಸ್ಟ್ರಿ ಆಫ್ ಇಂಡಿಯಾ
- ಎಕೊನಾಮಿಕ್ಸ್ ಆಫ್ ಯುನಿವರ್ಸಿಟಿಸ್ ಫೈನಾನ್ಸಿಸ್ ಇನ್ ಕರ್ನಾಟಕ"[೪೨]

**ಪುನರುಜ್ಜೀವನದ ಘಟ್ಟ :**

"ಶ್ರೀ ಹಾಲ ಭಾವಿ ತರುವಾಯ, ಆರ್.ಎಸ್. ಪಂಚಮುಖಿಯವರು ೧೯೬೦ ರಲ್ಲಿ ಈ ಸಂಸ್ಥೆಯ ನಿರ್ದೇಶಕರಾದರು. ಇದಕ್ಕೆ ಮೊದಲು ಅವರ ಅವಧಿಯಲ್ಲಿ ಸ್ಕೂಲ್ ಆಫ್ ಇಂಡಿಯನ್ ಪೋಲಿಯೊಗ್ರಾಫಿ ಸ್ಥಾಪಿಸಲಾಯಿತು. ಇಲ್ಲಿ ಮೂರು ತಿಂಗಳ ಅವಧಿಯ ಎರಡು ಕೋರ್ಸ್ ನಡೆಸಲಾಯಿತು. ದೇಶದ ವಿವಿಧೆಡೆಗಳಿಂದ ಸಂಶೋಧಕರು ಈ ಕೋರ್ಸಿಗೆ ಸೇರಿಕೊಂಡರು. ಇದು ಭಾರತದಲ್ಲಿನ ಪ್ರಥಮ ಖಾಸಗಿ ಸಾಹಸವಾಗಿದೆ. ಪಂಚಮುಖಿಯವರು ಮಾಡಿದ ಸಾಧನೆಯನ್ನು ಗುರುತಿಸಿ ಭಾರತ ಸರ್ಕಾರ ಇವರಿಗೆ ಹಲವಾರು ಪ್ರಶಸ್ತಿಗಳನ್ನು ನೀಡಿ ಗೌರವಿಸಿದೆ"[೪೩]

**ಆರ್.ಎಸ್. ಪಂಚಮುಖಿಯವರ ಸಾಧನೆ :**

ಇವರು ಕನ್ನಡ ಸಂಶೋಧನೆ ಸಂಸ್ಥೆಯ ನಿರ್ದೇಶಕರಾಗಿ ೧೯೩೯–೧೯೫೩ ರ ವರೆಗೆ ಸೇವೆ ಸಲ್ಲಿಸಿದರು. ಇವರ ಅವಧಿಯಲ್ಲಿ ವಡಗಾ, ಹರಕಲ್ಲು ಇತ್ಯಾದಿ ನಲವತ್ತು ಹೊಸ ಪುರಾತನ ನಿವೇಶನಗಳು ಶೋಧನವಾದವು. ಬಾದಾಮಿಯ ಬಂಡೆಗಲ್ಲು ಶಾಸನವನ್ನು ಪಂಚಮುಖಿಯವರು ಮತ್ತು ಭಾರತದ ಪ್ರಾಕ್ತನಶಾಸ್ತ್ರ ಇಲಾಖೆಯು ಕೂಡಿಯೆ ಕಂಡುಹಿಡಿದಿದ್ದಾರೆ. ಪಂಚಮುಖಿಯವರು ಉತ್ತರ ಕನ್ನಡ ಜಿಲ್ಲೆಯಲ್ಲಿ ಸಂಚಾರ ಮಾಡಿ ಸುಮಾರು ನೂರು ಕಂಚಿನ ಜೈನ ವಿಗ್ರಹಗಳನ್ನು ಮತ್ತು ಎಂಬತ್ತು ಹಸ್ತ ಲಿಖಿತ ತಡವೋಲೆ ಗ್ರಂಥಗಳನ್ನು ಸಂಸ್ಥೆಯ ಸಲುವಾಗಿ ಸಂಗ್ರಹಿಸಿದರು. ಸಹಾಯಕ ಸಂಶೋಧಕರೆಂದು ಕೆಲಸ ಮಾಡುತ್ತಿದ್ದಾಗ ಅಕ್ಕಲಕೋಟೆ ತಾಲ್ಲೂಕು ಸಾಂಗ್ಲಿ ಸಂಸ್ಥಾನದ ಹಿರೇಕೆರೂರು, ಹಾನಗಲ್ ತಾಲ್ಲೂಕಾ ಮತ್ತು ಬೆಳಗಾವಿ ಜಿಲ್ಲೆಯಲ್ಲಿ ಪ್ರತಿ ವರ್ಷ ಸಂಚಾರ ಮಾಡಿ ತಾಮ್ರ ಶಿಲಾಯುಗದ ನಿವೇಶನವಾಗಿ ಸಪ್ತಸಾಗರ ಮತ್ತು ತೇರದಾಳದ ಸುತ್ತಮುತ್ತಲಿನ ಪ್ರದೇಶದಲ್ಲಿರುವ ಬೃಹತ್‌ಚ್ಚಿಲಾ ಗೋರಿಗಳನ್ನು ಪತ್ತೆ ಹಚ್ಚಿದರು. ತುಂಗಾಭದ್ರ ತೀರದ ಇಬಗಿಯಲ್ಲಿ ಯುಗ ಮುಡಿದ ಸ್ಥಳದಿಂದ ಉಖಾಪಾತ್ರೆಯನ್ನು ದೊರಕಿಸಿದರು. ಕರ್ನಾಟಕ

ಇನ್ಸ್‌ಕ್ರಿಪ್ಷನ್ಸ್ ೧, ೨, ೩ನೇ ಸಂಪುಟಗಳನ್ನು ೧೯೪೦ ರಲ್ಲಿ ಪ್ರಕಟಿಸಿದರು. ನಂತರ ೧೯೫೩ ರ ವರೆಗಿನ ವಾರ್ಷಿಕ ವರದಿಗಳನ್ನು ಪ್ರಕಟಿಸಿದರು. ಕೃಷ್ಣ ಮತ್ತು ಮಲಪ್ರಭಾ ದಂಡೆಯ ಮೇಲಿನ ಪುರಾತನ ಸ್ಥಳಗಳನ್ನು ಪತ್ತೆ ಹಚ್ಚಿ ಡಾ॥ ಝುಯಿನರ್‌ಗಳ ಕಾಲ ನಿರ್ಣಯಿಸಲು ಯತ್ನಿಸಿದರು.

ಆರ್.ಎಸ್. ಪಂಚಮುಖಿಯವರ ಸಂಶೋಧನೆ ಕೇವಲ ಪ್ರಾಚ್ಯಾವಸ್ತು ಅನ್ವೇಷಣೆ ಮತ್ತು ಶಾಸನಗಳ ಅಭ್ಯಾಸಕ್ಕಷ್ಟೆ ಸೀಮಿತವಾಗಿರಲಿಲ್ಲ. ಅವರು ನಾಣ್ಯಶಾಸ್ತ್ರ, ವಾಸ್ತುಶಿಲ್ಪ, ಮೂರ್ತಿಶಿಲ್ಪ, ಕಲೆ, ಜಾನಪದ, ಸಾಹಿತ್ಯ, ಕನ್ನಡ ಮತ್ತು ಸಂಸ್ಕೃತ ಸಾಹಿತ್ಯ ಭಾರತೀಯ ಮತ್ತು ದ್ವೈತ ತತ್ವಜ್ಞಾನ, ಧರ್ಮ ಮತ್ತು ಹರಿದಾಸ ಸಾಹಿತ್ಯದಲ್ಲಿ ಇವುಗಳ ಕಡೆಗೆ ತಮ್ಮ ದೃಷ್ಟಿಯನ್ನು ಹರಿಸಿ ಕೆಲವು ಗ್ರಂಥಗಳನ್ನು ಸಿದ್ಧಪಡಿಸಿದರು. ಹರಿದಾಸ ಸಾಹಿತ್ಯವೆಂಬ ಗ್ರಂಥವು ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾಯಿತು. "ಗಂಧರ್ವಾಜ ಆ್ಯಂಡ್ ಕಿನ್ನರಾಜ" ಎಂಬ ಪುಸ್ತಕವು ಓದುಗರಿಗೆ ಗಂಧರ್ವರು ಮತ್ತು ಕಿನ್ನರರ ಬಗೆಗೆ ಮೂರ್ತ ಕಲ್ಪನೆಯನ್ನು ತಂದುಕೊಟ್ಟಿತು. ಇವರು ಸಂಸ್ಥೆಯ ನಿರ್ದೇಶಕರಾಗಿದ್ದ ವೇಳೆಗೆ ಅನೇಕ ಲೇಖನಗಳನ್ನು ಬರೆದಿದ್ದಾರೆ. "ಮಾಯೋ ಕಾಂಟ್ರಿಬ್ಯೂಷನ್ಸ್ ಟು ಇಂಡಾಲಜಿ" ಪ್ರಮುಖ ಲೇಖನವಾಗಿದೆ.

ಇದೇ ಸಂದರ್ಭದಲ್ಲಿ ಕರ್ನಾಟಕ ಸಂಶೋಧನ ಮಂಡಲದ ವಜ್ರಮಹೋತ್ಸವವನ್ನು ಆಚರಿಸಲಾಯಿತು. ಈ ಸಂಸ್ಥೆಯು ರಾಜಮನೆತನಗಳ ರಾಜಕೀಯ ಇತಿಹಾಸ, ಯುದ್ಧೋಪಕರಣಗಳು ಮತ್ತು ದಿಗ್ವಿಜಯಗಳಿಗೆ ಸಂಬಂಧಿಸಿದ ಕಾರ್ಯಗಳನ್ನಷ್ಟೇ ಅಲ್ಲದೆ ಕಲಿಕಾ ಪ್ರಧಾನವಾದ ವಿಚಾರ ಸಂಕೀರ್ಣಗಳನ್ನು ಸಂಘಟಿಸಬೇಕು. ಭಾರತದ ವೈಭವಯುತ ಸಂಸ್ಕೃತವನ್ನು ಪುನರುಜ್ಜೀವನ ಗೊಳಿಸುವ ಅಸ್ತ್ರವನ್ನಾಗಿ ಈ ಮಂಡಲವು ಕೆಲಸ ಮಾಡಬೇಕು. ಧರ್ಮಶಾಸ್ತ್ರ, ಶಾಸನಶಾಸ್ತ್ರ, ಪ್ರಾಚ್ಯಾಶಾಸ್ತ್ರಗಳಲ್ಲಿ ಹುದುಗಿರುವ ಭಾರತೀಯ ಸಂಸ್ಕೃತಿಯನ್ನು ಪುನಃ ಕಟ್ಟುವ ಕೆಲಸವನ್ನು ಈ ಮಂಡಲವು ಮಾಡಬೇಕೆಂಬುದು ಈ ಮಂಡಲದ ಸದಸ್ಯರ ಕನಸಾಗಿತ್ತು.

"ಆರ್.ಎಸ್. ಪಂಚಮುಖಿಯವರು ತಮ್ಮ ಜೀವನವೆಲ್ಲ ಕನ್ನಡ ಇತಿಹಾಸ ಮತ್ತು ಸಂಸ್ಕೃತಿ ಅಭ್ಯಾಸಕ್ಕೆ ಮೀಸಲಾಗಿಟ್ಟಿದ್ದರು. ಇವರ ಪಾಂಡಿತ್ಯಕ್ಕೆ ಮೆಚ್ಚಿ ಭಾರತ ಸರಕಾರವು ಅವರನ್ನು ಗೌರವಿಸಿತು. ಅಲ್ಲದೆ ಕೆಲ ಸಂಸ್ಥೆಗಳು 'ವಿದ್ಯಾರತ್ನ', 'ವಿದ್ಯಾಭೂಷಣ' ಮತ್ತು 'ಮಹಾಮಹಿಮೋಪಾಧ್ಯಾಯ' ಎಂಬ ಬಿರುದುಗಳನ್ನು ಕೊಟ್ಟು ಗೌರವಿಸಿದವು"[೪೪]

**ಮರಣ :**

ಆರ್.ಎಸ್. ಪಂಚಮುಖಿಯವರು ೪.೧೦.೧೯೮೨ ರಲ್ಲಿ ನವದೆಹಲಿಯಲ್ಲಿ ನಿಧನರಾದರು. ಇವರ ಮಾರ್ಗದರ್ಶನದಲ್ಲಿ ಆರೇಳು ವಿದ್ಯಾರ್ಥಿಗಳು ಇತಿಹಾಸ ಮತ್ತು ಸಾಹಿತ್ಯದಲ್ಲಿ ಪಿ.ಹೆಚ್.ಡಿ. ಪಡೆದುಕೊಂಡಿದ್ದಾರೆ. ಇಂತಹ ಮಹಾನ್ ಇತಿಹಾಸಕಾರರ ಮರಣದಿಂದ ಕರ್ನಾಟಕಕ್ಕೆ ತುಂಬಲಾರದ ಹಾನಿಯಾಗಿತ್ತು.

**ವ್ಯಕ್ತಿತ್ವ :**

ಆರ್.ಎಸ್. ಪಂಚಮುಖಿಯವರು ಇತಿಹಾಸ ತಜ್ಞರಾಗಿ, ಸಾಹಿತ್ಯ ಪ್ರೇಮಿಯಾಗಿ ಅದಲ್ಲದೆ ಉತ್ತಮ ಮಾರ್ಗದರ್ಶಿಯಾಗಿ ಎಲ್ಲರ ಮನ ಸೆಳೆದಿದ್ದಾರೆ. ಇವರಲ್ಲಿರುವ ನಿಸ್ವಾರ್ಥತೆ, ಸ್ವಾಭಿಮಾನ ಇವರ ಕೆಲಸದಲ್ಲಿನ ತಲ್ಲೀನತೆ, ಏಕಾಗ್ರತೆ ಎದ್ದು ಕಾಣುತ್ತದೆ. ಇವರು ನಾಣ್ಯಶಾಸ್ತ್ರದ ಬಗ್ಗೆ ಆಸಕ್ತಿ, ಅಭಿರುಚಿ ತೋರಿಸಿರುವುದು ಮೆಚ್ಚುವಂತ್ತದ್ದಾಗಿದೆ. ಅವರು ಕೈಗೊಂಡ ಸಂಶೋಧನ ಕಾರ್ಯಗಳು ಯಶಸ್ವಿಯಾಗಿವೆ. ಇವರಿಗೆ ಲಭಿಸಿರುವ ಬಿರುದುಗಳಿಂದ ಇವರ ವ್ಯಕ್ತಿತ್ವ ಮತ್ತು ಸಾಧನೆಗಳನ್ನು ಅರಿಯಬಹುದಾಗಿದೆ.

**

## ೧೧. ಡಾ॥ ಬಿ.ಎ. ಸಾಲೆ ತೊರೆ ಕ್ರಿಶ. ೧೯೦೦-೧೯೬೩



ಡಾ॥ ಬಿ.ಎ. ಸಾಲೆ ತೊರೆ

**ಪರಿಚಯ:**

ಭಾರತ ಮಟ್ಟದ ಇತಿಹಾಸ ರಚನೆಯಲ್ಲಿ ದಕ್ಷಿಣ ಭಾರತದ ಇತಿಹಾಸ ನಿರ್ಲಕ್ಷಿತವಾಗಿತ್ತು. ಕಾರಣ ಮೂಲ ಕೃತಿ ಅಥವಾ ಆಧಾರಗಳ ಕೊರತೆಯಾಗಿತ್ತು. ಹಾಗಾಗಿ ಇತಿಹಾಸವು ಬರಡಾಗಿತ್ತು. ಅಂತಹ ಕೊರತೆಯನ್ನು ತುಂಬಿಕೊಟ್ಟು ದಕ್ಷಿಣ ಭಾರತದ ಇತಿಹಾಸ ಅಧ್ಯಯನವನ್ನು ಶ್ರೀಮಂತ ಗೊಳಿಸಿದ ಮಹಾನ್ ಧೀಮಂತ ಬಿ.ಎ. ಸಾಲೆ ತೊರೆ ಇವರು ತಮ್ಮ ವಿಚಾರಗಳನ್ನು ಬರವಣಿಗೆಯ ಮೂಲಕ ವ್ಯಕ್ತಪಡಿಸಿದರು. ಇವರ ಸಂಶೋಧನೆ ಫಲವಾಗಿ ಕರ್ನಾಟಕ ಇತಿಹಾಸದ ಪ್ರಮುಖ ಘಟನೆಗಳು, ಮರೆಯಾಗಿದ್ದ ವಿಷಯಗಳು ಬೆಳಕಿಗೆ ಬರಲು ಕಾರಣವಾಯಿತು.

ಇವರು ಕರ್ನಾಟಕದ ಇತಿಹಾಸದಲ್ಲಿನ ವಿಜಯನಗರ ಕಾಲದ ಘಟನೆಗಳು ಪ್ರಮುಖವಾಗಿ ತುಳುವ ವಂಶದ ಇತಿಹಾಸದ ಬಗ್ಗೆ ಪರಿಪೂರ್ಣ ಮಾಹಿತಿಯನ್ನು ನೀಡಿದ್ದಾರೆ. ಅಲ್ಲದೆ ಅವರು ಮುಂದೆ ಬರುವ ಇತಿಹಾಸಕಾರರಿಗೆ ಮಾರ್ಗದರ್ಶಕರಾಗಿದ್ದಾರೆ.

**ಜನನ:**

ಡಾ॥ ಭಾಸ್ಕರ ಆನಂದ ನಾರಾಯಣರಾವ ಸಾಲೆ ತೊರೆ ರವರು ನಾರಾಯಣರಾಯಲ್ಲಿ ಕ್ರಿ.ಶ. ೧೧-೧೦-೧೯೦೦ ರಲ್ಲಿ ಕರ್ನಾಟಕ ರಾಜ್ಯದ ಮಂಗಳೂರಿನಲ್ಲಿ ಜನಿಸಿದ್ದರು.

**ಶಿಕ್ಷಣ:**

"ಬಿ.ಎ. ಸಾಲೆ ತೊರೆ ರವರು ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಮಂಗಳೂರಿನಲ್ಲಿ ಮುಗಿಸಿದ್ದರು. ನಂತರ ಮಂಗಳೂರಿನ ಸೆಂಟ್ ಅಲೋಸಿಯಸ್ ಕಾಲೇಜಿನಲ್ಲಿ ಓದಿ ೧೯೨೨ರಲ್ಲಿ ಪದವಿ ಪಾಸಾದರು. 'ಸೋವಿಯತ್' ಎಂಬ ಕಾಲೇಜಿನಲ್ಲಿ ಎಮ್.ಎ. ಪದವಿ ಪಡೆದುಕೊಂಡರು. ೧೯೨೫ರಲ್ಲಿ ಮದ್ರಾಸಿನ ಸೈದಾಪೇಟ ಕಾಲೇಜಿನಿಂದ ಎಲ್.ಟಿ. ಪದವಿ ಪಡೆದರು. ೧೯೩೧ರಲ್ಲಿ "ದಿ. ಸೋಶಿಯಲ್ ಐಂಡ್ ಪೊಲಟಿಕಲ್ ಲೈಫ್ ಇನ್ ದಿ ವಿಜಯ ನಗರ

ಎಂಪಾಯರ" ಎಂಬ ಪ್ರಬಂಧ ಬರೆದು ಲಂಡನ್ ವಿಶ್ವ ವಿದ್ಯಾಲಯದಿಂದ ಡಾಕ್ಟರೇಟ್ ಪದವಿ ಪಡೆದುಕೊಂಡರು. ನಂತರ ಅವರು ೧೯೩೩ರಲ್ಲಿ ಜರ್ಮನಿಯ ವಿಶ್ವವಿದ್ಯಾಲಯದಿಂದ ರಾಜ್ಯಶಾಸ್ತ್ರ ವಿಷಯದಲ್ಲಿ ಡಾಕ್ಟರೇಟ್ ಪದವಿಯನ್ನು ಸಂಪಾದಿಸಿದ್ದರು. ಮುಂಬಯಿ ವಿಶ್ವವಿದ್ಯಾಲಯದ ಎಂ.ಎ. ಪರೀಕ್ಷೆಯಲ್ಲಿ ತೆಲುಗು ಸುವರ್ಣ ಪದಕ ಲಭಿಸಿತ್ತು ಹಾಗೂ ಇವರು ದತ್ತಿಯನ್ನು ಪಡೆದುಕೊಂಡರು"[೪೫]

**"ಕೃತಿಗಳು:-**

- ವಿಜಯನಗರ ಎಂಪೈರ್
- ಹಿಸ್ಟರಿ ಆಫ್ ದಿ ತುಳುವಾಸ
- ಮೆಡೀವಲ್ ಜೈನಿಸಮ್
- ಮರಾಠಾ ಡೊಮಿನಿಯನ್ ಇನ್ ಕರ್ನಾಟಕ.
- ಎನ್ಸಿಯಂಟ್ ಇಂಡಿಯನ್ ಪೊಲ್ಟಿಕಲ್ ಥಾಟ್
- ಇಂಡಿಯನ್ ಡಿಪ್ಲೊಮೇಟಿಕ್ ರಿಲೇಷ್ನನ್ಸ್ ವಿಥ್ ದಿ ವೆಸ್ಟ್
- ಕನ್ನಡನಾಡಿನ ಚರಿತ್ರೆ (೧೯೪೧)
- ಇಂಡಿಯಾದ ರಿಲೇಶನ್ಸ್ ಉಯಿಥ್ ದಿ ಇಸ್ಟ್"[೪೬]

ಹೀಗೆ ಬಿ.ಎ. ಸಾಲೆ ತೊರೆ ಇವರು ಕರ್ನಾಟಕ ಚರಿತ್ರೆಗೆ ಸಂಬಂಧಿಸಿದಂತೆ ಹಲವಾರು ಗ್ರಂಥಗಳನ್ನು ರಚಿಸಿದ್ದಾರೆ.

**ಬಿ.ಎ. ಸಾಲೆ ತೊರೆ ರವರ ಸಾಧನೆ:-**

"ಸಾಲೆ ತೊರೆ ರವರು ಪುಣೆಯ ಸರ್ ಪರಶುರಾಮ ಭಾವು ಕಾಲೇಜಿನಲ್ಲಿ, ಅಹಮದಾಬಾದನ ಲಾಲ್‌ಬಾಯ್ ದಳಪತ್ ಕಾಲೇಜಿನಲ್ಲಿ ಮತ್ತು ಮುಂಬೈ ಸರ್ಕಾರದ ಗುಜರಾತ್ ಕಾಲೇಜಿನಲ್ಲಿ ಇತಿಹಾಸದ ಪ್ರೊಫೆಸರ್‌ರಾಗಿ ನಿವೃತ್ತರಾದರು. ಇವರು ನಿವೃತ್ತಿ ಹೊಂದಿದ ಮೇಲೆ ಡಾ|| ಡಿ.ಸಿ. ಪಾವಟೆ ಅವರನ್ನು ಕರ್ನಾಟಕ ವಿಶ್ವವಿದ್ಯಾಲಯದ ಇತಿಹಾಸದ ವಿಭಾಗಕ್ಕೆ ಮುಖ್ಯಸ್ಥರನ್ನಾಗಿ ನೇಮಿಸಿಕೊಂಡರು. ಇವರ ಸಹಾಯಕರಾಗಿ ಡಾ|| ಜಿ.ಎಸ್. ದಿಕ್ಷಿತ್ ಮತ್ತು ಪಿ.ಬಿ. ದೇಸಾಯಿಯವರು ಕೆಲಸ ಮಾಡಿದ್ದರು. ಇವರು ಕನ್ನಡ ಸಂಶೋಧನಾ ಸಂಸ್ಥೆಯ ಮುಖ್ಯಸ್ಥರಾದರು. ಸಪ್ತ ಸಾಗರದ ತಾಮ್ರ ಶಿಲಾಯುಗದ ನಿವೇಶನದಲ್ಲಿ ಸಂಸ್ಥೆಯ ವತಿಯಿಂದ ಉತ್ಖನನ ಕೈಗೊಳ್ಳಲು ಸಾಲೇತೂರು ರವರಿ ವ್ಯವಸ್ಥೆ ಮಾಡಿದ್ದರು. ಆದರೆ ಯಾವುದೋ ಕಾರಣದಿಂದ ಆ ವಿಚಾರ ನಿಂತುಹೊಯಿತು. ಸಾಲೇತೂರರು ೧೬೫ ಸಂಶೋಧನಾ ಲೇಖನಗಳನ್ನು ಮತ್ತು ೧೪ ಗ್ರಂಥಗಳನ್ನು ಬರೆದಿದ್ದಾರೆ. ಇವೆಲ್ಲಾ ಗ್ರಂಥಗಳು

ಇತಿಹಾಸ, ಸಂಸ್ಕೃತ ರಾಜ ನೀತಿಗಳಿಗೆ ಸಂಬಂಧಿಸಿವೆ. ಇವರು ಗ್ರೇಟ್ ಬ್ರಿಟನ್ ಪಶ್ಚಿಮ ಯುರೋಪಿನಲ್ಲಿ ಪ್ರವಾಸ ಮಾಡಿದ್ದಾರೆ. ಹಾಗೂ ೧೯೫೩ರಲ್ಲಿ ಹೇಗಿನಲ್ಲಿ ಕೂಡಿದ ಅಂತರಾಷ್ಟ್ರೀಯ ಕಾಂಗ್ರೆಸ್ ಆಫ್ ಆರ್ಕಿವೈಜ್‌ಗೆ ಭಾರತ ಸರ್ಕಾರದ ಪ್ರತಿನಿಧಿಯಾಗಿ ಹೋದರು ಮತ್ತು ಇವರು ಧಾರವಾಡದ ಬರೋಡಾ ಕೋಲ್ಹಾಪೂರದ ಶಿವಾಜಿ ವಿಶ್ವವಿದ್ಯಾಲಯಗಳಿಗೆ ಇತಿಹಾಸ ಅಧ್ಯಯನ ಸದಸ್ಯರಾಗಿ ಕೆಲಸ ಮಾಡಿದ್ದಾರೆ"[೪೭]

ಸಾಲೆ ತೊರೆ ರವರು "ವಿಜಯನಗರ ಸಾಮ್ರಾಜ್ಯದ ಸಾಮಾಜಿಕ ಮತ್ತು ರಾಜಕೀಯ ಜೀವನ" ಎಂಬ ಪಿ.ಹೆಚ್.ಡಿ. ಪ್ರಬಂಧವನ್ನು ಲಂಡನ್ ವಿಶ್ವವಿದ್ಯಾಲಯದಿಂದ ಪಡೆದರು. ಇವರ ಎರಡನೆ ಗ್ರಂಥ ಎನಿಸೆಂಟ್ ಕರ್ನಾಟಕ ತುಳುವಂಶ ನಡುವಿನ ಇತಿಹಾಸವನ್ನು ಇವರು ಆ ನಾಡಿನಲ್ಲಿ ಹುಟ್ಟಿದ್ದರಿಂದ ಆ ನಾಡಿನ ಬಗೆಗೆ ಬರೆದುದು ಸ್ವಾಭಾವಿಕ. ಆಗಿನ ಪದ್ಧತಿಯಂತೆ ಅವರು ಗಂಗಾ, ಕದಂಬ, ರಾಷ್ಟ್ರಕೂಟ, ಮುಂತಾದ ರಾಜ ಮನೆತನಗಳ ಬಗ್ಗೆ ಸ್ಥಳೀಯ ರಾಜ ಮನೆತನವಾದ ಆಳುಪರ ಚರಿತ್ರೆಯನ್ನು ಆರಿಸಿಕೊಂಡರು. ಈ ಮನೆತನವು ಕ್ರಿ.ಶ. ೨ನೇ ಶತಮಾನದಿಂದ ರಾಜಕೀಯ ರಂಗದಿಂದ ಯಾವ ಮಹತ್ವದ ಪಾತ್ರವನ್ನಾಡಿದೆ ಎಂಬುದನ್ನು ತೋರಿಸಿಕೊಟ್ಟರು. ಮದ್ಯಯುಗದ ಜೈನ್ ಧರ್ಮದ ಗ್ರಂಥದಲ್ಲಿ ಆ ಧರ್ಮವು ಕ್ರಿಪೂ. ೨೯೭ರಲ್ಲಿ ಕರ್ನಾಟಕ ಪ್ರವೇಶಿಸಿ ೧೨ನೇ ಶತಮಾನದ ವರೆಗೆ ಹೇಗೆ ಬೆಳೆಯುತೆಂಬುದನ್ನು ಅವರು ತಮ್ಮ ಗ್ರಂಥದಲ್ಲಿ ತೋರಿಸಿದ್ದಾರೆ. ಹೀಗೆ ಸಾಲೇತೂರು ರವರು ಕರ್ನಾಟಕ ಇತಿಹಾಸಕ್ಕೆ ತಮ್ಮ ಶ್ರೇಷ್ಠ ಸಾಧನೆಯನ್ನು ಮಾಡುವ ಮೂಲಕ ಕನ್ನಡ ಜನತೆಯ ಮನದಾಳದಲ್ಲಿದ್ದಾರೆ.

**ಸಂಶೋಧಕರಿಗೆ ಸಾಲೆ ತೊರೆ ಅವರು ನೀಡಿದ ಸಲಹೆಗಳು:-**

ಡಾ॥ ಬಿ.ಎ. ಸಾಲೆ ತೊರೆರವರು ನೀಡಿದ ಕೊಡುಗೆ ಅಪಾರವಾದದ್ದು. ಅವರು ಸಂಶೋಧನೆಯಲ್ಲಿ ಅಳವಡಿಸಿಕೊಂಡ ಕ್ರಮಗಳು ಮುಂಬರುವ ಸಂಶೋಧಕರಿಗೆ ಮಾರ್ಗಸೂಚಿಯಾಗಿವೆ. ಸಂಶೋಧನೆಯಲ್ಲಿ ಬಳಸುವ ಆಧಾರಗಳನ್ನು ಕುರಿತು ಸಂಶೋಧಕರಿಗೆ ಸಲಹೆ ನೀಡಿದ್ದಾರೆ.

**ಎಫಿಗ್ರಾಫಿ ಬಳಕೆ:**

ಸಂಶೋಧಕರು ಸಂಶೋಧನೆಯಲ್ಲಿ ಈ ಎಫಿಗ್ರಾಫಿ ಅಧ್ಯಯನ ಮಾಡುವದರಿಂದ ಆ ವಿಷಯದ ಬಗ್ಗೆ ಸಂಶೋಧಕನು ಹೆಚ್ಚಿನ ಮಾಹಿತಿ ಸಂಗ್ರಹಣೆ ಮಾಡಿ ಸಂಶೋಧನೆ ಮಾಡಬೇಕೆಂದು ಸಲಹೆ ಮಾಡಿದ್ದಾರೆ.

**ಕೃತಿಯ ಬಳಕೆ:**

ಸಂಶೋಧನೆಯಲ್ಲಿ ಸಂಶೋಧಕರು ಕೃತಿಗಳನ್ನು ಆಧಾರವಾಗಿಟ್ಟುಕೊಂಡು ರಚನೆ ಮಾಡಬೇಕು. ಕೃತಿಗಳು ಅಧ್ಯಯನ ಮಾಡುವುದರಿಂದ ಆ ವಿಷಯದ ಬಗ್ಗೆ ಉಳಿದ ಅಂಶಗಳು ಸಂಶೋಧಕನು ಹೆಚ್ಚಿನ ಮಾಹಿತಿಯನ್ನು ಸಂಗ್ರಹಣೆ ಮಾಡಬೇಕೆಂದು ಹೇಳಿದ್ದಾರೆ.

**ಐತಿಹಾಸಿಕ ಸ್ಮಾರಕಗಳ ಬಳಕೆ:**

ಸಾಲೆ ತೊರೆ ರವರು ಐತಿಹಾಸಿಕ ಸ್ಮಾರಕಗಳು ಸಂಶೋಧನೆಯಲ್ಲಿ ಬಳಕೆ ಮಾಡಿಕೊಳ್ಳಬೇಕು. ಆದ್ದರಿಂದ ಅಗೋಚರವಾದ ಎಷ್ಟೋ ವಿಷಯಗಳು ಹೊರಬರುತ್ತವೆ ಎಂದು ತಿಳಿಸಿದ್ದರು. ಅದಕ್ಕಾಗಿ ಅವರು ಪಂಡರಾಪೂರದ ಜೈನ ಸನ್ಯಾಸಿಗಳು ವಾಸಿಸಿದ ಬಸದಿಯನ್ನು ಅಧ್ಯಯನ ಮಾಡಿದ್ದರು.

**ತುಲನಾತ್ಮಕ ಅಧ್ಯಯನ:**

ಸಾಲೆ ತೊರೆ ರವರು ಇತಿಹಾಸದ ಯಾವುದೇ ವಿಷಯವನ್ನು ಅಧ್ಯಯನ ಮಾಡಬೇಕಾದರೆ ತುಲನಾತ್ಮಕವಾಗಿ ಅಧ್ಯಯನ ಮಾಡಬೇಕು. ವಿಮರ್ಶೆ ಮಾಡುವುದರಿಂದ ಹಲವಾರು ವಿಷಯಗಳ ಹಿಂದೆ ಅಡಗಿರುವ ವಿಚಾರಗಳು ಬೆಳಕಿಗೆ ಬರುತ್ತವೆ ಎಂದು ಸಾಲೇತೂರುರವರು ಹೇಳಿದ್ದರು.

**ಬರವಣಿಗೆ ಓದುಗಾರರನ್ನು ಆಕರ್ಷಿಸಬೇಕು:**

ಸಂಶೋಧಕರು ಬರೆಯುವ ಲೇಖನ ಓದುಗಾರರನ್ನು ಆಕರ್ಷಿತವಾಗಿರಬೇಕು. ಅದಕ್ಕಾಗಿ ಸರಳ ಭಾಷೆ ಮತ್ತು ವಿಷಯಗಳ ಜೋಡಣೆ, ಕಲೆ ಮುಂತಾದವು ಸಂಶೋಧಕರು ಅಳವಡಿಸಿಕೊಂಡಿರಬೇಕೆಂದು ಸಲಹೆ ನೀಡಿದ್ದಾರೆ.

**ಬಿ.ಎ. ಸಾಲೆ ತೊರೆ ರವರ ಕೊಡುಗೆಗಳು:-**

ಸಾಲೆ ತೊರೆ ರವರು ಇತಿಹಾಸ ಲೇಖನ ಕಲೆಗೆ ತಮ್ಮ ಬರವಣಿಗೆಯ ಮೂಲಕ ಹಲವಾರು ವಿಷಯಗಳನ್ನು ಸಂಶೋಧನೆ ಮಾಡಿ ತಮ್ಮ ಕೃತಿಯನ್ನು ರಚಿಸುವುದರ ಮೂಲಕ ಇತಿಹಾಸ ಕ್ಷೇತ್ರಕ್ಕೆ ಮಹತ್ವದ ಕೊಡುಗೆಯನ್ನು ನೀಡಿದ್ದಾರೆ.

**ವಿಜಯ ನಗರದ ಸಾಮಾಜಿಕ ಮತ್ತು ರಾಜಕೀಯ ಇತಿಹಾಸ:**

"ಈ ಗ್ರಂಥವು ಎರಡು ಸಂಪುಟಗಳು ಹೊಂದಿದೆ. ಸಾಲೆ ತೊರೆ ರವರು ಈ ಗ್ರಂಥವು ರಚನೆ ಮಾಡಲು ತಾವು ಸಂಶೋಧನೆ ಕೈಗೊಂಡಿದ ಮಹಾ ಪ್ರಭಂಧವನ್ನು ಆಧಾರವಾಗಿಟ್ಟುಕೊಂಡು ರಚನೆ ಮಾಡಿದ್ದಾರೆ. ಈ ಗ್ರಂಥದಲ್ಲಿ ವಿಜಯನಗರ ಕಾಲಕ್ಕೆ ಸಂಬಂಧಿಸಿದ ವಿಷಯಗಳು ಬೆಳಕಿಗೆ ತಂದರು.

**ವಿಜಯನಗರ ಮೂಲದ ಬಗ್ಗೆ :**

ಸಂಗಮ ವಂಶದ ರಾಜಕೀಯ ಇತಿಹಾಸದ ಬಗ್ಗೆ ಹೆಚ್ಚಿನ ಮಾಹಿತಿ ನೀಡಿದ್ದಾರೆ.

ವಿಜಯನಗರ ಕಾಲದ ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ವಿವಿಧ ಹಬ್ಬಗಳು, ಉತ್ಸವ, ಜಾತಿ ಪದ್ಧತಿ, ಆಹಾರ, ಉಡುಪು, ಮಹಿಳೆಯರ ಸ್ಥಾನಮಾನ, ದೇವದಾಸಿ ಪದ್ಧತಿ, ವೈಶ್ಯೆಯರ ಸವಲತ್ತುಗಳ ಬಗ್ಗೆ ಮುಂತಾದ"[೪೮]

**ಕರ್ನಾಟಕ ಇತಿಹಾಸ:**

ಸಾಲೆ ತೊರೆ ರವರು ಕನ್ನಡ ನಾಡಿನ ಬಗ್ಗೆ ಅಧ್ಯಯನ ಮಾಡಿ ಇತರ ಸಂಶೋಧಕರಂತೆ ಇವರು ಕನ್ನಡ ನಾಡಿನ ಬಗ್ಗೆ ಹೇಳಿಕೆಯನ್ನು ಸಮಾಜಿಕ ಇತಿಹಾಸದಲ್ಲಿ ಎಪಿಗ್ರಾಫಿ ಆಧಾರವಾಗಿಟ್ಟುಕೊಂಡು ವಿಷಯ ತಿಳಿಸಿದ್ದಲ್ಲದೆ ಲಂಡನಿನಲ್ಲಿ ಕನ್ನಡ ನಾಡಿನ ಬಗ್ಗೆ ಇರುವ ಆಧಾರಗಳು ಬಳಸಿಕೊಂಡರು.

ಇವರು ಮುಖ್ಯವಾಗಿ ವಿಜಯನಗರ ಸಾಮ್ರಾಜ್ಯದ ಆರ್ಥಿಕ ಸ್ಥಿತಿ, ನ್ಯಾಯ, ಶೈಕ್ಷಣಿಕ ಸಂಸ್ಥೆಗಳು ಜನರ ಜೀವನ ಮುಂತಾದ ವಿಷಯಗಳ ಕುರಿತು ಮಾಹಿತಿಯನ್ನು ನೀಡಿದ್ದಾರೆ.

**ತುಳುವ ಇತಿಹಾಸ:**

"ಇವರು ತಮ್ಮ ಈ ಕೃತಿಯಲ್ಲಿ ತುಳು ಪ್ರಾಂತ್ಯದ ಬಗ್ಗೆ ಅಲ್ಲಿನ ಭೌಗೋಳಿಕ ಸ್ಥಿತಿಗಳ ಬಗ್ಗೆ ಮತ್ತು ಗಂಗರು, ಕದಂಬರು, ರಾಷ್ಟ್ರಕೂಟರ, ಸ್ಥಳೀಯ ಪ್ರಾಂತ್ಯದ ಬಗ್ಗೆ ಅಧ್ಯಯನ ಮಾಡಿ, ನಂತರ ಆಲೂಪರ ಬಗ್ಗೆ ಹೆಚ್ಚಿನ ಮಾಹಿತಿ ನೀಡಿದ್ದಾರೆ. ಈ ಕೃತಿಯಲ್ಲಿ ಮುಖ್ಯವಾಗಿ ಐದು ವಿಷಯಗಳು ಒಳಗೊಂಡಿವೆ.

೧) ದಂತ ಕಥೆ

೨) ಕೌಟುಂಬಿಕ ಪರಿಸರ

೩) ವಿದೇಶಗಳೊಂದಿಗೆ ಆಲೂಪ ಅರಸರ ಸಂಬಂಧ

೪) ಜನಾಂಗಿಯ ಮತ್ತು ಧಾರ್ಮಿಕ ಆಧಾರಗಳು

೫) ಲಿಖಿತ ಮೂಲ ಆಧಾರಗಳು"[೪೯]

ಸಾಲೆ ತೊರೆ ರವರು ತುಳು ವಂಶದ ಧಾರ್ಮಿಕ ಪದ್ಧತಿಗಳನ್ನು ಕುರಿತು ಅಧ್ಯಯನ ಮಾಡಿದ್ದರು. ನಂತರ ತುಳು ಅರಸರ ಗ್ರಾಮ ಸಂಘಟನೆ, ಸ್ಥಳೀಯ ಅಧಿಕಾರಿಗಳ ಕಾರ್ಯಗಳು ಮತ್ತು ಭೂಮಿಯ ವರ್ಗೀಕರಣ, ಶಿಕ್ಷೆಯ ವಿಧಗಳು,

ನ್ಯಾಯ, ಆಡಳಿತ ಅಲ್ಲದೆ ಐತಿಹಾಸಿಕವಾಗಿ ಹಲವಾರು ಕುಟುಂಬಗಳ ಬಗ್ಗೆ ಬಲ್ಲಾಳದ ಕಾರಂತರ ಬಗ್ಗೆ ಹೇಳಿದ್ದಾರೆ. ದಿನನಿತ್ಯ ಜೀವನಕ್ಕೆ ಬೇಕಾಗುವ ಅಗತ್ಯ ವಸ್ತುಗಳ ಬಗ್ಗೆ ಇವರು ಮಾಹಿತಿ ನೀಡಿದ್ದಾರೆ.

**ಪಶ್ಚಿಮ ಪೂರ್ವ ರಾಯಭಾರ ಸಂಬಂಧ:**

ಸಾಲೆ ತೊರೆ ರವರು ಕೌಟಿಲ್ಯನ ಅರ್ಥಶಾಸ್ತ್ರ ಮತ್ತು ಪಂಚತಂತ್ರ ಕೃತಿಗಳನ್ನು ಆಧಾರವಾಗಿಟ್ಟುಕೊಂಡು, ಈ ಕೃತಿಗಳನ್ನು ಪ್ರಕಟಿಸಿದ್ದರು. ಇದರಲ್ಲಿ ಪಶ್ಚಿಮ ಮತ್ತು ಪೂರ್ವ ದೇಶಗಳೊಂದಿಗೆ ಭಾರತ ಹೊಂದಿದ್ದ ರಾಯಭಾರ ಸಂಬಂಧಗಳ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ.

**ಭಾರತದ ಪೂರ್ವ ರಾಯಭಾರ ಸಂಬಂಧ:**

ಇವರ ಈ ಕೃತಿಯು ೧೯೬೦ರಲ್ಲಿ ಪ್ರಕಟಿಸಿದ್ದರು. ಇದು ಕೇವಲ ಪೂರ್ವ ದೇಶಗಳೊಂದಿಗೆ ಭಾರತದ ರಾಯಭಾರ ಸಂಬಂಧದ ಬಗ್ಗೆ ಸಮಗ್ರ ಮಾಹಿತಿಯನ್ನು ನೀಡುತ್ತದೆ.

**ಮರಣ:**

ಪ್ರತಿಭಾವಂತರಾದ ಬಿ.ಎ. ಸಾಲೆ ತೊರೆ ರವರು ತಮ್ಮ ೬೩ನೇ ವಯಸ್ಸಿನಲ್ಲಿದ್ದಾಗಲೇ ೧೮-೧೨-೧೯೬೩ ರಂದು ಧಾರವಾಡದಲ್ಲಿ ನಿಧನ ಹೊಂದಿದರು.

**ವ್ಯಕ್ತಿತ್ವ:**

ಸಾಲೆ ತೊರೆ ರವರು ಕನ್ನಡ ನಾಡಿನಲ್ಲಿ ಜನಿಸಿ, ಕನ್ನಡ ನಾಡಿನ ಕುರಿತು ಹೆಮ್ಮೆಯಿಂದ ವಿಜಯನಗರ ಸಾಮ್ರಾಜ್ಯದ ಸಂಕ್ಷಿಪ್ತ ಇತಿಹಾಸವನ್ನು ತಿಳಿಸುವುದರ ಮೂಲಕ, ಇವರು ಕನ್ನಡ ನಾಡನ್ನು ಕುರಿತು ಹೊಗಳಿದ್ದಾರೆ. ಬಹುಮುಖ ಪ್ರತಿಭಾವಂತರಾದ ಇವರು, ಕರ್ನಾಟಕ ಇತಿಹಾಸಕ್ಕೆ ಇವರು ಮಾಡಿದ ಸೇವೆ ಅಪಾರವಾದದ್ದು. ಇವರು ಪ್ರಮುಖವಾಗಿ ಕನ್ನಡಿಗರ ಗುಣಗಾನಗಳ ಕುರಿತು ವಿವರಿಸಿದ್ದರು. ಹಾಗಾಗಿ ಕನ್ನಡ ನಾಡಿನ ಜನತೆಯು ಇವರ ಸಾಧನೆಯನ್ನು ಮೆಚ್ಚಿ, ಇವರನ್ನು ಅವರ ಮನದಾಳದಲ್ಲಿಟ್ಟುಕೊಂಡಿದ್ದಾರೆ.

**

## ೧೨. ಡಾ॥ ಎನ್. ಶ್ರೀಕಂಠ ಶಾಸ್ತ್ರಿ ಕ್ರಿ.ಶ.೧೯೦೪-೧೯೬೦

### ಪರಿಚಯ:



ಡಾ॥ ಎನ್. ಶ್ರೀಕಂಠ ಶಾಸ್ತ್ರಿ

ಡಾ॥ ಎನ್. ಶ್ರೀಕಂಠ ಶಾಸ್ತ್ರಿಯವರು ತಮ್ಮ ಜೀವನ ಪರ್ಯಂತ ಇತಿಹಾಸ ಅಧ್ಯಯನದಲ್ಲಿ ತೊಡಗಿದ ಇವರು ಭಕ್ತರು ಭಗವಂತನನ್ನು ಪೂರ್ಣವಾಗಿ ನಂಬುವ ರೀತಿಯಲ್ಲಿ ಚರಿತ್ರೆಯನ್ನು ನಂಬಿದ ಸುಪ್ರಸಿದ್ಧ ಮಹಾಪಂಡಿತರಲ್ಲಿ ಒಬ್ಬವರಾಗಿದ್ದರು. ಇವರು ಕರ್ನಾಟಕವನ್ನಾಳಿದ ರಾಜ ಮನೆತನಗಳ ಕುರಿತು ಹಲವಾರು ಗ್ರಂಥಗಳನ್ನು ರಚಿಸಿದ ಇವರ ಸಾಧನೆಗೆ ಈ ನಾಡಿನ ಜನತೆಯು ಚಿರಋಣಿಯಾಗಿದ್ದಾರೆ.

### ಜನನ:

"ಡಾ॥ ಎನ್. ಶ್ರೀಕಂಠಶಾಸ್ತ್ರಿಯವರು 'ನೀರು ತುಂಬವ ಹಬ್ಬ' ಎಂಬ ಮಂಗಳಕರ ದಿನದಲ್ಲಿ ೧೯೦೪ರ ನವೇಂಬರ ೫ರಂದು ನಂಜನ ಗೂಡಿನಲ್ಲಿ ಸಬ್‌ರಜಿಸ್ಟರಾಗಿದ್ದ, ರಾಮಸ್ವಾಮಿ ಶಾಸ್ತ್ರಿ ಮತ್ತು ಧರ್ಮ ನಿಷ್ಠೆ ಶೇಷಮ್ಮ ದಂಪತಿಗಳ ಎರಡನೇ ಮಗನಾಗಿ ಜನಿಸಿದರು. ಶ್ರೀಕಂಠ ಶಾಸ್ತ್ರಿಯವರು ಅಜ್ಜಿಯ ಅಕ್ಕರೆಯ ಸವಿಯನುಣ್ಣುತ್ತಾ ಬೆಳೆದರು. ಅತ್ಯುತ್ತಮ ಪರಂಪರೆ ಅವರದಾಗಿತ್ತು. ಕಾರಣ ಅವರ ಅಜ್ಜಿ ಅನೇಕ ಪದ್ಯಶ್ಲೋಕ ಹಾಗೂ ರಚನೆಗಳನ್ನು ಕಂಠಪಾಠ ಮಾಡಿಕೊಂಡಿದ್ದರು. ಶಾಸ್ತ್ರಿಯವರು ಸ್ವಲ್ಪ ಬೆಳೆದ ನಂತರ ಅಪೂರ್ವ ಸಂಗ್ರಹಗಳನ್ನು ಬರೆದಿಟ್ಟರು. ಅವರ ಪೂರ್ವಜರಾಗಿದ್ದ, ಯಜ್ಞ ಭಟ್ಟ ಇಮ್ಮಡಿ ಕೆಂಪೆಗೌಡನ ರಾಜ ಆಸ್ಥಾನವನ್ನು ಅಲಂಕರಿಸಿದ ಮಹಾಪಂಡಿತರಾಗಿದ್ದರು"[೫೦]

### ಶಿಕ್ಷಣ:

ಡಾ॥ ಎನ್. ಶ್ರೀಕಂಠ ಶಾಸ್ತ್ರಿಯವರು ಕೋಲಾರದಲ್ಲಿ ತಮ್ಮ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಆರಂಭಿಸಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಇತಿಹಾಸ ಮತ್ತು ಅರ್ಥ ಶಾಸ್ತ್ರದಲ್ಲಿ ಹೆಚ್ಚಿನ ಅಂಕಗಳನ್ನು ಗಳಿಸಿ ಉತೀರ್ಣರಾದರು. ೧೯೧೯ರಲ್ಲಿ ಅವರ ತಂದೆ ನಿವೃತ್ತಿ ಹೊಂದಿದ್ದರಿಂದ ಕುಟುಂಬ ನಿವಾರಣೆಯಲ್ಲಿ ತಾಪತ್ರೆಯ ಉಂಟಾಗಿತ್ತು. ಆ ಸಮಯದಲ್ಲಿ ಶಾಸ್ತ್ರಿಯವರು ಎಂ.ಎ. ತರಗತಿಯ ವಿದ್ಯಾರ್ಥಿಯಾಗಿ ಮೈಸೂರಿನ ಮಹಾರಾಜ ಕಾಲೇಜನ್ನು ಪ್ರವೇಶಿಸಿದ್ದರು. ಅಲ್ಲಿ ಅವರಿಗೆ ಎಸ್.ಎಸ್.

ಸುಬ್ಬರಾಯರು, ಹೆಚ್. ಕೃಷ್ಣರಾವ, ಹೆಚ್.ವ್ಹಿ ಕೃಷ್ಣಸ್ವಾಮಿ ಅಯ್ಯಾಂಗರ, ಜೆ.ಸಿ. ರೋಲ್ಲೋ, ಹೆಚ್. ನಂಜುಂಡಯ್ಯಾ, ಬಿ.ಎಮ್.ಶ್ರೀ ಪ್ರೋ॥ ಎಮ್. ಹಿರಿಯಣ್ಣಾ, ಎಸ್.ವ್ಹಿ. ರಂಗಣ್ಣಾ, ವೇಂಕಟ ಸುಬ್ಬಯ್ಯಾ, ವೇಂಕಟೇಶ್ವರ, ಶ್ಯಾಮ ಶಾಸ್ತ್ರಿ ಎಮ್.ಹೆಚ್. ಕೃಷ್ಣ ಮುಂತಾದ ಬೌದ್ಧಿಕ ದಿಗ್ಗಜರುಗಳ ಪರಿಚಯವಾಗಿ, ಅವರ ಅಡಿದಾವರೆಗಳಲ್ಲಿ ಕುಳಿತು ಜ್ಞಾನಾರ್ಜನೆ ಮಾಡುವ ಅದೃಷ್ಟ ಅವರದಾಯಿತು. ಅವರಿಂದ ಸ್ಫೂರ್ತಿಗೊಂಡು ಅವರು ತಮ್ಮೆಲ್ಲಾ ಸಮಯವನ್ನು ಗ್ರಂಥಾಲಯಗಳಲ್ಲಿ ಕಳೆದು, ಅಪಾರ ಜ್ಞಾನವನ್ನು ಸಂಪಾದಿಸಿಕೊಂಡರು. ಶ್ರೀಕಂಠ ಶಾಸ್ತ್ರಿಯವರು ವಿಶ್ವವಿದ್ಯಾಲಯದ ಇತಿಹಾಸ ಸಂಘದಲ್ಲಿ "ಶಿವಗಂಗಾ" ಕರ್ನಾಟಕ ಸಂಘದ ಆಶ್ರಯದಲ್ಲಿ "ಕನ್ನಡ ನಾಗಾನಂದ" ಮತ್ತು ಸುಸಂಸ್ಕೃತ ಸಂಘದಲ್ಲಿ "ಧ್ವನಿ" ಎಂಬ ವಿಚಾರಗಳ ಬಗ್ಗೆ ಪ್ರೌಢ ಪ್ರಬಂಧಗಳನ್ನು ಮಂಡಿಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾದರು[೫೧]. ತಮ್ಮ ತಾಯಿಯ ಕಡೆಯ ಪೂರ್ವಜರಿಗೆ ತೊಡಗಿ ಗತಕಾಲವನ್ನು ಒಳಹೊಕ್ಕು ಪರಿಶೀಲಿಸಲು ಆರಂಭಿಸಿದ್ದರು. ಇವರು ಇದೇ ಸಂಧರ್ಭದಲ್ಲಿ ಎಂ.ಎ. ವಿದ್ಯಾರ್ಥಿಯಾಗಿದ್ದಾಗಲೇ ಶಾಸ್ತ್ರಿಯವರು ಬಳ್ಳಾರಿಯಲ್ಲಿ ಶ್ರೀಮತಿ ನಾಗರತ್ನಮ್ಮ ಎಂಬ ಕನ್ಯವನ್ನು ೧೯೨೫ರಲ್ಲಿ ವಿವಾಹವಾದರು. ಇವರ ಲೇಖನಿಯಿಂದ ಹೊರಹೊಮ್ಮಿದುದ್ದು, "ಕಾಂಕ್ವೆಸ್ಟ್ಸ್ ಆಫ್ ಶೀಲಾದಿತ್ಯಾ ಇನ್ ದಿ ಸೌತ್" ಎಂಬ ಮಹಾ ಲೇಖನ ಪ್ರಕಟವಾಯಿತು.

**ಡಾ॥ ಎನ್.ಶ್ರೀಕಂಠ ಶಾಸ್ತ್ರಿಯವರ ಆರಂಭದ ಸಾಧನೆಃ**

೧೯೨೬ರ ಜುಲೈ ತಿಂಗಳಲ್ಲಿ "ಜನರಲ್ ಆಫ್ ರಾಯಲ್ ಎಷಿಲ್ಯಾಟಿಕ್ ಸೋಸೈಟಿ ಆಫ್ ಗ್ರೇಟ್ ಬ್ರಿಟನ್ ಆಂಡ್ ಐರ್ಲೆಂಡ್" ಎಂಬ ಸುಪ್ರಸಿದ್ಧ ಅಂತರಾಷ್ಟ್ರೀಯ ನಿಯತಕಾಲಿಕದಲ್ಲಿ ಪ್ರಕಟವಾಯಿತು. ಇಂತಹ ಸುಪ್ರತಿಷ್ಠಿತ ನಿಯತಕಾಲಿಕ್‌ವೊಂದನ್ನು ಪ್ರಕಟಿಸಿತೆಂದರೆ, ಅದರಿಂದ ಆ ಲೇಖನದ ತೂಕ ಎಷ್ಟಿದ್ದಿರಬೇಕು ? ಎಂಬುದು ಸ್ಪಷ್ಟವಾಗುತ್ತದೆ. ಇದರಿಂದ ಇನ್ನು ಹೆಚ್ಚು ಉತ್ಸಾಹಿತರಾದ ಅವರು "ಎರಡನೇ ದೇವರಾಯನನ್ನು ಕುರಿತು ರಚಿಸಿದ ಪ್ರಬಂಧವು 'ಇಂಡಿಯನ್ ಅನ್ವಿಕ್ವೆರಿ ಮಾದಲನ್ ರಿವ್ಯೂ'ನಲ್ಲಿ ಪ್ರಕಟವಾಯಿತು"[೫೨] ಇದರಿಂದ ಪ್ರಾಧ್ಯಾಪಕ ವೆಂಕಟೇಶ್ವರರಿಗೆ ಶಾಸ್ತ್ರಿಯವರ ಶಕ್ತಿ, ಸಾಮರ್ಥ ಎಷ್ಟು ಅಪೂರ್ವವಾದುದೆಂಬುದು ಸ್ಪಷ್ಟವಾಯಿತು. ಅವರು ಎಂ.ಎ. ಪದವಿಧರರಾಗಿದ್ದಾಗ ಆಗಿನ ಕುಲಪತಿಗಳಾಗಿದ್ದ ಡಾ॥ ವ್ರಜೇಂದ್ರನಾಥ ನೇಲ್ ರವರ ಆದೇಶದ ಮೇರೆಗೆ ಪ್ರಾಧ್ಯಾಪಕ ವೆಂಕಟೇಶ್ವರ ಅವರು ಮೈಸೂರು ಇತಿಹಾಸದ ಮೂಲ ಆಧಾರಗಳ ಬಗ್ಗೆ ಸಂಶೋಧನೆಯನ್ನು ನಡೆಸಲು ತಿಳಿಸಿದ್ದರು. ಅವರು ಮೈಸೂರು ಬಹು ಸೀಮಿತ ಕ್ಷೇತ್ರವಾಗುವುದರಿಂದ ಕರ್ನಾಟಕ ಚರಿತ್ರೆಯ ಮೂಲಾಧಾರಗಳನ್ನು ಕುರಿತು ಸಂಶೋಧನೆ ನಡೆಸುವುದು ಸೂಕ್ತ ಎಂಬುವುದಾಗಿ ಸಲಹೆ ಮಾಡಿದ್ದು, ಶಾಸ್ತ್ರಿಯವರಿಗೆ ಆ ಕೆಲಸ ವಹಿಸಿಕೊಡಲಾಗಿ, ಅವರು ೧೯೨೮ರಲ್ಲಿ ಪ್ರಥಮ ಸಂಪುಟವನ್ನು

ಸಿದ್ಧಪಡಿಸಿದ್ದರು. ೧೯೪೦ರಲ್ಲಿ ಪ್ರಕಟವಾದ ಆ ಸಂಪುಟವು ಡಾ॥ ಬಾರ್‌ನೆಟ್ ರವರಂತಹ ಪಂಡಿತರ ಪ್ರಶಂಸೆಗೆ ಪಾತ್ರವಾಯಿತು.

**ಡಾ॥ ಎನ್. ಶ್ರೀಕಂಠ ಶಾಸ್ತ್ರಿಯವರ ಸೇವೆ:**

೧೯೩೦ರಲ್ಲಿ ಶಾಸ್ತ್ರಿಯವರು ಮಹಾರಾಜ ಕಾಲೇಜಿನಲ್ಲಿ ಇತಿಹಾಸ ವಿಭಾಗದಲ್ಲಿ ಟ್ಯೂಟರ್‌ರಾಗಿ, ನಂತರ ೧೯೩೫ರಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಲಾರಂಭಿಸಿದ್ದರು. ಅವರು ಕನ್ನಡ ವಿಭಾಗದಲ್ಲಿ ಆನರ್ಸ್ ಪದವಿ ತರಗತಿಯ ವಿದ್ಯಾರ್ಥಿಗಳಿಗೆ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿಯ ಬಗ್ಗೆ ಪಾಠವನ್ನು ಹೇಳುತಿದ್ದರು. ಅವರು ೧೯೩೫ರಲ್ಲಿ ತಮ್ಮ ತಾತ ಬರೆದಿದ್ದ ಕೃತಿಗಳಿಗೆ ಐತಿಹಾಸಿಕ ಪೀಠಿಕೆಗಳನ್ನು ಬರೆದರಲ್ಲದೆ, ಕನ್ನಡ ವೃತ್ತ ಪತ್ರಿಕೆಗಳಿಗೆ ಅನೇಕ ಪ್ರಬಂಧಗಳನ್ನು ಬರೆದುಕೊಟ್ಟರು. ಇವರು ೪೦೦ ಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ (ಪ್ರಬಂಧ) ಗ್ರಂಥಗಳನ್ನು ರಚಿಸಿದ್ದರು. ಮೈಸೂರು ವಿಶ್ವವಿದ್ಯಾಲಯವು ಕನ್ನಡ ಪಠ್ಯ ಪುಸ್ತಕಗಳ ಪ್ರಕಟಣೆಯನ್ನು ಆರಂಭಿಸಿದ್ದಾಗ, ಕನ್ನಡ ಭಾಷೆಯಲ್ಲಿ ಕೆಲವು ಗ್ರಂಥಗಳು ಬರೆದರು. ಇವರ ಅಮೋಘವಾದ ಸೇವೆಗಳಿಗಾಗಿ ಮೈಸೂರ ವಿಶ್ವವಿದ್ಯಾಲಯವು ಅವರಿಗೆ 'ಡಿ. ಲಿಟ್ ಪದವಿ' ಯನ್ನು ನೀಡಿತ್ತು. ೧೯೫೪ರಲ್ಲಿ ಅವರು ಇತಿಹಾಸ ಇಲಾಖೆಯ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರಾದರು. ದುರಾದೃಷ್ಟವಶಾತ್ ೧೯೫೮ರಲ್ಲಿ ಅವರು ರಕ್ತ ಒತ್ತಡ ಹಾಗೂ ಪಾರ್ಶ್ವವಾಯುವಿನ ದಾಳಿಗೆ ತುತ್ತಾಗಿ, ೩ ತಿಂಗಳ ಕಾಲ ಮೈಸೂರಿನ ಶ್ರಿ ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ಮಲಗಿ ಚಿಕಿತ್ಸೆಯನ್ನು ಪಡೆಯಬೇಕಾಯಿತು. ಈ ಭಯಂಕರ ಶಾರೀರಿಕ ತೊಂದರೆಯು ಅವರಿಗೆ ವರವೇ ಆಯಿತ್ತು. ಕಾರಣ ಅವರು ಬೌದ್ಧಿಕವಾಗಿ ಇನ್ನೂ ಬೆಳೆದರು. 'ಲಿಂಗದ ಜ್ಞಾನ' ಅವರಿಗೆ ಅತೀವ ಆನಂದ ಮತ್ತು ಮನ ಶಾಂತಿಯನ್ನು ತಂದುಕೊಟ್ಟಿತ್ತು. ಅವರು ೧೯೬೦ರ ನವೆಂಬರ ೧೨ರಂದು ಸೇವೆಯಿಂದ ನಿವೃತ್ತರಾದರು.

**"ಕೃತಿಗಳು:**

- ಐಕೋನಾ ಗ್ರಾಫೀ ಆಫ್ ಶ್ರೀ ವಿದ್ಯಾರಣ್ಯನ ಮತಂತ್ರ (೧೯೪೪)
- ಗಂಗಾಸ್ ಆಫ್ ತಲಕಾಡ (೧೯೫೨)
- ದಿ ಪ್ರೋಟೊ ಇಂಡಿಕ್ ರಿಲಿಜನ್ (೧೯೪೭)
- ಪ್ರಪಂಚ ಚರಿತ್ರೆಯ ರೂಪರೇಶೆಗಳು.
- ಪುರಾತತ್ವ ಶೋಧನೆ.
- ಭಾರತೀಯ ಸಂಸ್ಕೃತಿ.
- ಹೋಯ್ಸಳ ವಾಸ್ತುಶಿಲ್ಪ.
- ರೋಮನ್ ಚಕ್ರಾಧಿಪತ್ಯದ ಚರಿತ್ರೆ.

ಹೀಗೆ ಶಾಸ್ತ್ರಿಯವರು ಹಲವಾರು ಗ್ರಂಥಗಳನ್ನು ರಚಿಸಿದ್ದರು. ಅವುಗಳಲ್ಲಿ ಕೆಲವು ಇಂಗ್ಲೀಷ ಮತ್ತು ಕನ್ನಡ ಗ್ರಂಥಗಳನ್ನು ಕೂಡ ರಚಿಸಿದ್ದಾರೆ"[೨೩]

**ಡಾ॥. ಶ್ರೀಕಂಠ ಶಾಸ್ತ್ರಿಯವರು ಸಂಶೋಧಕರಿಗೆ ಮಾಡಿದ ಸಲಹೆಗಳು:**

"ಶಾಸ್ತ್ರಿಯವರು ಸತ್ಯಾಪಥ, ಅವರೊಬ್ಬ ಸತ್ಯದ ಉಪಾಸಕ, ಇತಿಹಾಸ ಅವರ ಉಸಿರೆ ಆಗಿದಿತ್ತು. ಆ ಕ್ಷೇತ್ರದ ಸಂಶೋಧನೆಯಲ್ಲಿ ಪ್ರಮಾನಂದವನ್ನು ಸವಿದ ರಸಋಷಿ. ಅವರ ಪ್ರಕಾರ ಇತಿಹಾಸವು ಕೇವಲ ವೃತ್ತಿಪರ ಚರಿತ್ರೆ ಲೇಖಕರ ವಿಶೇಷ ಕ್ಷೇತ್ರವಲ್ಲ. ಅದು ವ್ಯಕ್ತಿಗೂ ಮುಖ್ಯವಾಗಿರುವ ವಿಷಯ. ಚರಿತ್ರೆಯನ್ನು ಈ ದೃಷ್ಟಿಯಿಂದ ವಿಚಾರ ಮಾಡಿದ ಕೆಲವೇ ವ್ಯಕ್ತಿಗಳಲ್ಲಿ, ಪಂಡಿತರಲ್ಲಿ ಒಬ್ಬರಾಗಿದ್ದ ಶಾಸ್ತ್ರಿಯವರು ಅತ್ಯಂತ ವ್ಯಾಪಕವಾಗಿದ್ದ ಆದ್ಯತ ವಿಚಾರಣೆಗಳಿಂದ ಕೂಡಿದ ಮತ್ತು ಗಾಢವಾಗಿದ್ದ ಇತಿಹಾಸ ಅಧ್ಯಯನಗಳ ಕಟ್ಟವನ್ನು ಕಟ್ಟಿ ಬೆಳೆಸಿದ್ದರು. ಸಮುದಾಯ ಅಥವಾ ಜನತೆ ಅವರ ಘಟಕವಾಗಿದಂತೆ ವಿನಃ ಒಬ್ಬ ಪ್ರಮುಖರನ್ನು ಕುರಿತು ಅಧ್ಯಯನ ಮಾಡಿದರು. ಸಂಬಂಧಪಟ್ಟ ಪ್ರತಿ ವಿವರವನ್ನು ಪರೀಕ್ಷಿಸಿದ್ದರು. ವಿವಿಧ ಮೂಲ ಆಧಾರಗಳಲ್ಲಿ ಅಡಗಿಕೊಂಡಿದ್ದ ವಿಚಾರಗಳನ್ನೆಲ್ಲಾ ಪಡೆಯುವುದಕ್ಕಾಗಿ ತೆಲುಗು, ತಮಿಳು, ಸಂಸ್ಕೃತ ಭಾಷೆಗಳನಲ್ಲದೆ ಜರ್ಮನ, ರಷಿಯನ್, ಚೀನಿ, ಜಪಾನಿ, ಫ್ರೇಂಚ್, ಪಾಳಿ, ಗ್ರೀಕ್, ಲ್ಯಾಟಿನ್, ಈಜಿಪ್ಶಿಯನ್, ಸುಮೇರಿಯನ್ ಮುಂತಾದ ಭಾಷೆಗಳನ್ನು ಕಲಿತರು. ಅವರ ವಿಶಾಲ ದೃಷ್ಟಿಯು ಸರ್ಕಾರ, ಕಾನೂನು ಹಾಗೂ ಸಂಕೋಚಿತ ಮತಧರ್ಮಗಳಾಚೆಗೆ ಹರಡಿ, ಜನತೆಗೆ ಸಂಪ್ರದಾಯ ಜನಶಾಂತಿ ಕಲೆ ಇತ್ಯಾದಿಗಳ ಮೇಲೆ ಕೇಂದ್ರಿಕೃತವಾಯಿತು. ಆದ್ದರಿಂದ ಪುರಾತತ್ವ, ಶಾಸ್ತ್ರ ಶಾಸನ, ವಿಜ್ಞಾನ, ನಾಣ್ಯ ಶಾಸ್ತ್ರ, ಸಾಹಿತ್ಯ ಮುಂತಾದ ಎಲ್ಲಾ ಸುಸಂಬಂಧ ಆಧಾರಗಳ ವಿಚಾರಗಳನ್ನು ವಸ್ತು ನಿಷ್ಠೆಯಾಗಿ ವೀಕ್ಷಿಸಿ, ಪರಿಶೀಲಿಸಿ ಸಮಾಜ ಹಾಗೂ ಸಾಮಾನ್ಯ ಜನ ಜೀವನದ ಪ್ರತಿ ಮುಖವನ್ನು ಸರಿಯಾಗಿ ವಿವರಿಸಲು ಪ್ರಯತ್ನಿಸಿದ್ದರು. ಸಂಶೋಧಕನು ವಿವರಗಳ ಸಂಗ್ರಹಣೆ ಮತ್ತು ಅವುಗಳ ನಿರ್ದಿಷ್ಟ ವೈಜ್ಞಾನಿಕ ವಿವರಣೆಯನ್ನು ನೀಡಿದರೆ ಮಾತ್ರ ಸಾಲದ್ದು, ಅದು ನಿರ್ದಿಷ್ಟ ವಸ್ತು ನಿಷ್ಠತೆ ಹಾಗೂ ಸತ್ಯ ನಿಷ್ಠತೆ ಅವನಲ್ಲಿರಬೇಕು"[೨೪]

ಅವನು ಪೂರ್ವಗ್ರಹದ ಕಾರಣ ಬೆಳೆಸಲಾಗಿದ್ದ, ದುರಭಾಷೆಯ ಉತ್ಪ್ರೇಕ್ಷೆ ಹಾಗೂ ಅರ್ಧ ಸತ್ಯಗಳನ್ನು ಬಿಟ್ಟು ಇತಿಹಾಸದ ಚೌಕಟ್ಟಿನಲ್ಲಿರಬೇಕು. ಸತ್ಯವಾದ ಚಿತ್ರಣವನ್ನು ನೀಡಲು ಪ್ರಮಾಣಿಕವಾಗಿ ಪ್ರಯತ್ನಿಸಬೇಕು. ಇತಿಹಾಸದಲ್ಲಿ ವಿವರಣೆ ಬಹುಮುಖ್ಯವಾಗಿರಬೇಕು. ಕಾರಣ ಅದು ಅತ್ಯಂಥ ಸಂಕೀರ್ಣವಾದ ವಿಷಯ ವಾಗಿರುವುದರಿಂದ, ಅಲ್ಲಿ ಇದೇ ಅಂತಿಮ ನಿರ್ಣಯ ಎಂಬ ಮಾತಿಗೆ ಸ್ಥಳವಿಲ್ಲ. ಹೊಸ ಹೊಸ ವಿಚಾರಗಳು ಬೆಳಕಿಗೆ ಬಂದಂತೆ, ಹಳೆ ನಿರ್ಣಯ ಬದಲಾಗಬೇಕು.

ಮತ್ತು ಚರಿತ್ರೆಯ ಪ್ರಾಚ್ಯಾಯಿಂದ ಕೂಡಿರುವ ನಿಂತ ನೀರಿನ ಮಡುವಲ್ಲವೆಂದು ಅವರು ಒತ್ತಿ ಹೇಳಿದ್ದರು.

ಈ ಕಾರಣದಿಂದ ಅವರು ನಿಸ್ಸಂದೇಹವಾಗಿ ವೈಜ್ಞಾನಿಕ ಇತಿಹಾಸ ಕಾರರಾಗಿದ್ದರು ಎಂಬುವುದಾಗಿ ಹೇಳಬಹುದು. ಅವರು ಸತ್ಯವನ್ನು ಗುರಿಯಾಗಿ ಹಾಗೂ ಮಾರ್ಗದರ್ಶಕ ದೀಪವನ್ನಾಗಿ ಇಟ್ಟುಕೊಂಡು ಅವರು ಮೂಲಾಧಾರಗಳ ಸತತ ಅಧ್ಯಯನ, ಹೊಸ ವಿಷಯಗಳ ಅನ್ವೇಷಣೆ, ವಸ್ತು ನಿಷ್ಠೆ, ಪರಿಶೀಲನೆ ಮತ್ತು ವಿವರಣೆ ನೀಡುವ ಕಾರ್ಯವನ್ನು ಕೈಗೊಂಡರು. ಸ್ವಂತಿಕೆಯಿಂದ ಕೂಡಿ ಸತತ ಚಿಂತನೆಗಳನ್ನು ಮಾಡಿ ಆರ್ಯರು ಹೊರ ದೇಶದಿಂದ ಭಾರತಕ್ಕೆ ಬಂದವರಲ್ಲಿ ಇವರು ಸಿಂಧೂ ನಾಗರೀಕತೆ ಸಂಪೂರ್ಣವಾಗಿ ಆರ್ಯ ಸಂಸ್ಕೃತಿ ಅಥರ್ವರಣ ವೇದವನ್ನು ಅತ್ಯಂತ ಪುರಾತನವಾದದ್ದು. ಸಿಂಧೂ ನದಿ ಕಣಿವೆಯಲ್ಲಿ ಸಿಕ್ಕಿರುವ ಮುದ್ರೆಗಳ ಮೇಲಿರುವ ಬರಹಗಳು ಅಥರ್ವರಣ ವೇದದ ಮಂತ್ರಗಳಾಗಿರಬಹುದು. ಸಲ್ಲೇಖನವು ಆತ್ಮಹತ್ಯೆ ಮುಂತಾದ ನೂತನ ಸಿದ್ಧಾಂತಗಳನ್ನು ಮಂಡಿಸಿದ್ದರು.

**ವ್ಯಕ್ತಿತ್ವ:**

ಅವರು ಆಘಾದ ಪಾಂಡಿತ್ಯವನ್ನು ಹೊಂದಿದ್ದರು. ಅವರ ನಮ್ರತೆ ಮತ್ತು ಸತ್ಯದ ಪ್ರತಿಪಾದನೆ ಜನರ ಮೆಚ್ಚುಗೆಗೆ ಪಾತ್ರವಾಯಿತು. ದಿಟ್ಟೆದೆಯಿಂದ ಸತ್ಯವನ್ನು ಎತ್ತಿ ಹಿಡಿದು ಅಪಾರ ಜ್ಞಾನದಾಹ ಸಂಶೋಧನೆಯಲ್ಲಿ ಅತ್ಯಾಶಕ್ತಿ ಮತ್ತು ಗುರಿ ಸಾಧನೆಗಾಗಿ ಮಾಡುತಿದ್ದ ಸತತ ಪರಿಶ್ರಮ ಇತ್ಯಾದಿ ಗುಣಗಳ ಕಾರಣ ಅತ್ಯಂತ ಶ್ರಮ ಸಾಧ್ಯವಾದ ಸಾಧನೆಯನ್ನು ಗಳಿಸುವುದು ಶ್ರೀಕಂಠ ಶಾಸ್ತ್ರಿಯವರಿಗೆ ಸಾಧ್ಯವಾಯಿತು. ಇವರು ಸಾಹಿತ್ಯದ ಮೇಲೆ ನಂಬಿಕೆಯನ್ನಿಟ್ಟು, ಇತಿಹಾಸ ರಚಿಸಿದ ಮಹಾನ್ ಪಂಡಿತರಾಗಿದ್ದರು. ಇವರ ಗ್ರಂಥಗಳು ಇತಿಹಾಸದಲ್ಲಿ ಉತ್ತಮ ಚರ್ಚೆಯಲ್ಲಿವೆ ಎಂದು ಹೇಳಬಹುದು. ಅವರ ಸಾಧನೆ ಗಣನೀಯವಾಗಿದೆ.

**

## ೧೩. ಪಿ.ಬಿ. ದೇಸಾಯಿ ಕ್ರಿ.ಶ. ೧೯೧೦-೧೯೭೪

**ಪರಿಚಯ:**



**ಪಿ.ಬಿ. ದೇಸಾಯಿ**

ಪ್ರತಿಭಾವಂತರಾದ ಪಿ.ಬಿ. ದೇಸಾಯಿಯವರು ಕರ್ನಾಟಕ ಚರಿತ್ರೆಕಾರರಲ್ಲಿ ಇವರು ಒಬ್ಬರು. ಇವರು ಕರ್ನಾಟಕ ಇತಿಹಾಸ ಸಾಹಿತ್ಯ ಸಂಸ್ಕೃತಿಗಳನ್ನು ಕುರಿತು ಆಳವಾಗಿ ಅಭ್ಯಾಸ ಮಾಡಿ ಸಂಶೋಧನೆಯಲ್ಲಿ ನಿರತರಾಗಿದ್ದು, ಅವರು ೧೯೩೧ರಲ್ಲಿ ನಿವೃತ್ತರಾದ ಮೇಲೆ ವಿಶ್ವವಿದ್ಯಾಲಯ ಧನ ಸಹಾಯ ಆಯೋಗದ ಪ್ರಾಧ್ಯಾಪಕರಾಗಿದ್ದರು. ಇವರು ಕನ್ನಡ ನಾಡಿನ ಶಾಸನಗಳ ಮತ್ತು ಕರ್ನಾಟಕವನ್ನು ಆಳಿದ ರಾಜ ಮನೆತನ ಕುರಿತು ಹಲವಾರು ಗ್ರಂಥಗಳನ್ನು ರಚಿಸಿದ್ದರು. ಇವರು ೧೯೭೩ರಲ್ಲಿ ನಡೆದ ಭಾರತದ ಇತಿಹಾಸ ಸಮ್ಮೇಳನದಲ್ಲಿ ಶಾಸನಶಾಸ್ತ್ರ ವಿಭಾಗದ ಅಧ್ಯಕ್ಷತೆ ಸ್ಥಾನ ವಹಿಸಿಕೊಂಡರು.

**ಜನನ:**

ಪಾಂಡುರಂಗ ಭೀಮರಾವ ದೇಸಾಯಿ ಇಂದಿನ ಕೊಪ್ಪಳ ಜಿಲ್ಲೆಯ ಕನ್ನಾಳದಲ್ಲಿ ಜನ್ಮ ತಾಳಿದ ಇವರು, ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಶಿಕ್ಷಣ ಪಡೆದರು. ತಂದೆ ಕಿನ್ನಾಳದವರಾದ ಭೀಮರಾವ ಮತ್ತು ತಾಯಿ ಭಾಗಿರತಿ ಎಂಬ ದಂಪತಿಗಳ ಹಿನೇ ಪುತ್ರರು ದೇಸಾಯಿಯವರು. ೧೯೧೦ ಡಿಸೆಂಬರ ೨೪ ರಂದು ಜನಿಸಿದ್ದರು.

**ಶಿಕ್ಷಣ:**

"ದೇಸಾಯಿಯವರ ಪ್ರಾಥಮಿಕ ವಿದ್ಯಾಭ್ಯಾಸವು ಸೇಡ್‌ಂದಲ್ಲಿ ಮತ್ತು ಮಾಧ್ಯಮಿಕ ಶಿಕ್ಷಣ ಗುಲಬರ್ಗಾದಲ್ಲಿ ಆಯಿತು. ೧೯೩೦ರಲ್ಲಿ ಸಂಸ್ಕೃತ ಮತ್ತು ಕನ್ನಡ ಐಚ್ಛಿಕ ವಿಷಯಗಳನ್ನಾಗಿ ಆರಿಸಿಕೊಂಡು ಮುಂಬೈಯಿ ವಿಶ್ವವಿದ್ಯಾಲಯ ಎಂ.ಎ. ಪದವಿಧರಾದರು. ಅವರು ಈ ಸಂಸ್ಕೃತ ಪರೀಕ್ಷೆಗೆ ಒಂದು ಅಂಗವಾಗಿ ಲಿಪಿ ಬೆಳವಣಿಗೆ ಶಾಸ್ತ್ರವನ್ನು ಆರಿಸಿಕೊಂಡರು. ನಂತರ ಆಳವಾಗಿ ಅಭ್ಯಾಸ ಮಾಡಿ ಸಂಶೋಧನೆಯಲ್ಲಿ ನಿರತರರಾಗಿದ್ದ ದೇಸಾಯಿಯವರು ೧೯೩೧ರಲ್ಲಿ ನಿವೃತ್ತರಾದ ಇವರು ವಿಶ್ವವಿದ್ಯಾಲಯದ ಧನ ಸೇವಾ ಆಯೋಗದ ಪ್ರಾಧ್ಯಾಪಕರಾಗಿದ್ದರು. ಇವರು ಶಾಸನ ಸಂಗ್ರಹದಲ್ಲಿ ಹಳ್ಳಿಯಿಂದ ಹಳ್ಳಿಗೆ ಸಂಚರಿಸಿ ಅಪಾರ ಶ್ರಮವಹಿಸಿದ್ದರು. ೧೯೭೩ರಲ್ಲಿ ಅಖಿಲ ಭಾರತ ಇತಿಹಾಸ ಸಮ್ಮೇಳನದ ಶಾಸನಶಾಸ್ತ್ರ ವಿಭಾಗದ ಅಧ್ಯಕ್ಷತೆ ಸ್ಥಾನವನ್ನು ಅಲಂಕರಿಸಿದ್ದರು"[೫೫]

"ಬಿ.ಪಿ. ದೇಸಾಯಿಯವರ ಕೃತಿಗಳು:-

- ಬಸವೇಶ್ವರ ಆ್ಯಂಡ್ ಹಿಜ್ ಟೈಮ್ಸ್.
- ಕನ್ನಡ ನಾಡಿನ ಶಾಸನಗಳು.
- ಕರ್ನಾಟಕದ ಕಲಚೂರಿಗಳು.
- ಮಿಂಚಿದ ಮಹಿಳೆಯರು.
- ಜೈನಿಸಮ್ ಇನ್ ಸೌತ್ ಇಂಡಿಯಾ
- ಹಿಸ್ಟರಿ ಆಫ್ ಕರ್ನಾಟಕ.
- ಡಿಸ್ಕ್ರೆಪ್ಟಿವ್ ಕ್ಯಾಟಲಾಗ್ ಆಫ್ ಮ್ಯಾನ್ಯೂಕ್ರಿಪ್ಟ್ ಹಿಂದಿ, ಕನ್ನಡ, ರಿಸರ್ಚ್.
- ಕನ್ನಡ ಇನ್‌ಸ್ಕ್ರಿಪ್ಷನ್ ಇನ್ ಹೈದ್ರಾಬಾದ ಸ್ಟೇಟ್.
- ಕನ್ನಡ ಇನ್‌ಸ್ಕ್ರಿಪ್ಷನ್ ಆಫ್ ಆಂಧ್ರ ಪ್ರದೇಶ.
- ಫೌಂಡರ್ಸ್ ಆಫ್ ವಿಜಯನಗರ.
- ಶಾಸನ ಪರಿಚಯ (೧೯೫೬).
- ಶಿವಚರಿತ್ರಾ ವೃತ್ತ ಸಂಗ್ರಹ.
- ಸುಮಾರು ನಾಲ್ಕ ನೂರಕ್ಕೂ ಹೆಚ್ಚು ಸಂಶೋಧನಾ ಪ್ರಬಂಧಗಳು ಬರೆದರು. ಇವುಗಳಲ್ಲದೆ 'ನಿಂತಿದ ಮಹಿಳೆಯರು', 'ಕುಂತಲೇಶ್ವರ ಮುದಗಜಮಲ್ಲಾ', 'ಕರ್ನಾಟಕದ ಕಲಚೂರಗಳು', 'ಕನ್ನಡ ನಾಡಿನ ಶಾಸನಗಳು' ದೇಸಾಯಿಯವರ ಕನ್ನಡ ಗ್ರಂಥಗಳು. ಶಿವಾಜಿಯ ಜೀವನಕ್ಕೆ ಸಂಬಂಧಿಸಿದ ಸಾಮಗ್ರಿಗಳನ್ನೊಳಗೊಂಡ 'ಶಿವಚರಿತ್ರೆ ವೃತ್ತ ಸಂಗ್ರಹ' ಎಂಬ ಮರಾಠಿ ಗ್ರಂಥವನ್ನು ಬರೆದಿದ್ದಾರೆ. ೧೦೫ ಕನ್ನಡ ಲೇಖನಗಳು, ಸುಮಾರು ೨೩೦ ಮರಾಠಿ ಲೇಖನಗಳು ಬರೆದಿದ್ದಾರೆ"[೫೬]

**ಪ್ರಮುಖ ವಿಚಾರ ಧಾರೆಗಳು:**

ಅವರು ಕನ್ನಡ ಸಂಶೋಧನ ಸಂಸ್ಥೆಯ ನಿರ್ದೇಶಕರಾಗಿ ಅಲ್ಲಿ ಪುರಾತತ್ವ ವಸ್ತು ಸಂಗ್ರಹಾಲಯವನ್ನು ದೇಸಾಯಿಯವರು ರಚಿಸಿದ್ದರು. ಅನೇಕ ವಿದ್ವಾಂಸರಿಂದ ವಿದ್ವಾತ ಪೂರ್ಣ ಉಪನ್ಯಾಸಗಳನ್ನು ಪರಿಚಿಯಿಸಿ, ಅವರು ಗ್ರಂಥ ರೂಪದಲ್ಲಿ ಹೊರತಂದರು. ಇನ್ನೊಂದು ಮುಖ್ಯ ಕೆಲಸ ಕನ್ನಡ ಸಂಶೋಧನಾ ಸಂಸ್ಥೆಯ ಹಸ್ತಪ್ರತಿ ವಿಭಾಗದ ಹಸ್ತ ಪ್ರತಿಗಳ ವಿಮಾರ್ಶಾತ್ಮಕ ಪಟ್ಟಿಯನ್ನು ಪ್ರಕಟಿಸಿದ್ದರು.

**ಇತಿಹಾಸಕ್ಕೆ ನೀಡಿದ ಇವರ ಕೊಡುಗೆಗಳು:**

೧೯೩೯ರಲ್ಲಿ ಕೇಂದ್ರ ಸರ್ಕಾರದ ಪುರಾತತ್ವ ಇಲಾಖೆಯ ಶಾಸನ ಶಾಲೆಯಲ್ಲಿ ಸಹಾಯಕ ಸಂಶೋಧಕರಾಗಿ ಕೆಲಸಕ್ಕೆ ಸೇರಿದ ಇವರು, ೧೭ ವರ್ಷಗಳ ಕಾಲ ಉದಕ ಮಂಡಲದಲ್ಲಿದ್ದು, ಶಾಸನ ಶಾಸ್ತ್ರವನ್ನು ಆಳವಾಗಿ ಅಭ್ಯಾಸಿಸಿ, ಅದರಲ್ಲಿ

ಸಂಪೂರ್ಣ ಪಾಂಡಿತ್ಯ ಪಡೆದರು. "ದಕ್ಷಿಣ ಭಾರತ ಶಾಸನ ಸಂಪುಟಗಳ ಪೈಕಿ ೧೧ನೇ ಸಂಪುಟದ ಮೊದಲ ಭಾಗವನ್ನು ಎನ್. ಲಕ್ಷ್ಮೀನಾರಾಯಣರಾಯರೊಂದಿಗೆ ಹಾಗೂ ೧೩ನೇ ಸಂಪುಟವನ್ನು ತಾವೇ ಸಂಪಾದಿಸಿದ್ದರು. ೧೯೪೭ರಲ್ಲಿ ಚಂದ್ರವಳ್ಳಿಯಲ್ಲಿ ನಡೆಸಲಾದ ಉತ್ಖನನದಲ್ಲಿ ಇವರು ಭಾಗವಹಿಸಿದ್ದರು. ೧೯೫೭ರಲ್ಲಿ ಅದೇ ವಿಶ್ವವಿದ್ಯಾಲಯದ ಪ್ರಾಚೀನ ಭಾರತ ಇತಿಹಾಸ ಹಾಗೂ ಸಂಸ್ಕೃತ ಇಲಾಖೆಯಲ್ಲಿ ರಿಡರ್‌ರಾಗಿ ನೇಮಕಗೊಂಡ ದೇಸಾಯಿಯವರು ೧೯೬೨ರಲ್ಲಿ ಅದರ ಮುಖ್ಯಸ್ಥರು ಮತ್ತು ಕನ್ನಡ ಸಂಶೋಧನ ಸಂಸ್ಥೆಯ ನಿರ್ದೇಶಕರಾಗಿದ್ದರು. ೧೯೬೭ರಲ್ಲಿ ಇವರಿಗೆ ಪ್ರಾಧ್ಯಾಪಕ ಹುದ್ದೆ ದೊರಕಿತು. ಇವರು ಶಾಸನ ಶಾಸ್ತ್ರವನ್ನು ವೈಜ್ಞಾನಿಕವಾಗಿ ಕಲಿಸಿಕೊಟ್ಟರು. ಶಾಸನ ಶಾಸ್ತ್ರದ ಡಿಪ್ಲೋಮಾವನ್ನು ಮೊದಲ ಬಾರಿಗೆ ರೂಪಿಸಿದವರು ಇವರಾಗಿದ್ದಾರೆ."[೫೭]

**ವಿಶೇಷ ಘಟನೆಗಳು:**

"ಮುಂಬೈ ವಿಶ್ವವಿದ್ಯಾಲಯ ಎಂಟ್ರೆನ್ಸ್ ಪರೀಕ್ಷೆಯ ನಂತರ ಅನಾರೊಗ್ಯದಿಂದಾಗಿ ಇವರು ಸುಮಾರು ೬ ವರ್ಷಗಳ ಕಾಲ ಅಂದರೆ (೧೯೨೬–೩೨) ವರೆಗೆ ವಿದ್ಯಾಭ್ಯಾಸ ಮುಂದುವರಿಸಲಾಗಲಿಲ್ಲ. ಅನಂತರ ಇವರು ೧೯೩೫ರಲ್ಲಿ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಸಂಸ್ಕೃತದಲ್ಲಿ ಆನರ್ಸ್ ಶ್ರೇಣಿಯ ಪದವಿ ಪಡೆದರು. ೧೯೩೭ರಲ್ಲಿ ಇವರಿಗೆ ಸಂಸ್ಕೃತ ಹಾಗೂ ಕನ್ನಡ ಭಾಷೆಗಳಲ್ಲಿ ಎಂ.ಎ. ಪದವಿ ದೊರೆಯಿತು. ಅನಾರೋಗ್ಯದಿಂದಾಗಿ ವಿಶ್ರಾಂತಿ ಪಡೆಯುತಿದ್ದಾಗಲೂ, ಇವರು ತಮ್ಮ ಸುತ್ತಮುತ್ತಲಿನ ಸ್ಥಳಗಳಲ್ಲಿದ್ದ ಶಿಲಾ ಶಾಸನಗಳನ್ನು ಅಧ್ಯಯನ ಮಾಡುವ ಹವ್ಯಾಸವನ್ನು ಬೆಳೆಸಿಕೊಂಡರು. ಎಂ.ಎ. ಪರೀಕ್ಷೆಯಲ್ಲಿ ಇವರು ಅಧ್ಯಯನ ವಿಷಯಗಳಲ್ಲಿ ಲಿಪಿ ಶಾಸ್ತ್ರವು ಒಂದಾಗಿತೆಂದು ಹೇಳಲಾಗಿದೆ"[೫೮]

ದೇಸಾಯಿಯವರು ಪ್ರಖ್ಯಾತ ಶಾಸನ ಶಾಸ್ತ್ರಜ್ಞರು "ಜೈನಿಝುಮ್ ಇನ್ ಸೌತ್ ಇಂಡಿಯಾ" ಎಂಬ ಜೈನ ಶಾಸನ ಗ್ರಂಥಕ್ಕೆ ಕರ್ನಾಟಕ ವಿಶ್ವವಿದ್ಯಾಲಯದಿಂದ ದಿ ಲಿಟ್ ಪದವಿಯನ್ನು ಪಡೆದ ಮೊದಲಿಗರು.

**ಶಾಸನ ಶಾಸ್ತ್ರಕ್ಕೆ ಇವರು ಸಲ್ಲಿಸಿದ ಸೇವೆ:**

ದೇಸಾಯಿಯವರು ಶಾಸನ ಶಾಸ್ತ್ರವನ್ನು ವೈಜ್ಞಾನಿಕವಾಗಿ ವಿದ್ಯಾರ್ಥಿಗಳಿಗೆ ಕಲಿಸಿಕೊಡಲು ಶಾಸನ ಶಾಸ್ತ್ರದ ಡಿಪ್ಲೋಮಾ ಶಿಕ್ಷಣವನ್ನು ರೂಪಿಸಿದ್ದರು. ಅನೇಕ ವಿದ್ವಾಂಸರಿಂದ ಉಪನ್ಯಾಸ ಮಾಡಿಸಿ ಅವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದ್ದರು. ಇವರು ಕುತ್ನೂರಿನಲ್ಲಿ ವಾಸಿಸುತಿದ್ದಾಗ ಅಲ್ಲಿಯ ಸುತ್ತಮುತ್ತಲಿನ ಊರಿನ ಶಾಸನಗಳನ್ನು ಅಭ್ಯಾಸ ಮಾಡಿದರು. ಮುಂದೆ ಅವರು ಈ ಶಾಸನಗಳ ಅಭ್ಯಾಸವನ್ನು

ಕೊಪ್ಪಳ ಮತ್ತು ಗುಲಬರ್ಗಾ ಜಿಲ್ಲೆಗೂ ವಿಸ್ತರಿಸಿದ್ದರು. ಅಲ್ಲಿ ಅವರಿಗೆ ಕಲ್ಯಾಣಿ ಚಾಲುಕ್ಯರ, ಕಲಚೂರಿ ಮತ್ತು ದೇವಗಿರಿ ಯಾದವರ ಅನೇಕ ಶಾಸನಗಳು ದೊರೆತವು.

"೧೯೩೯ರಲ್ಲಿ ದೇಸಾಯಿಯವರು ಭಾರತ ಪ್ರಾಕ್ತನ ಶಾಸ್ತ್ರ ಇಲಾಖೆಯ ಅಂಗವಾದ ಶಾಸನಶಾಸ್ತ್ರ ವಿಭಾಗದಲ್ಲಿ ನೇಮಕ ಹೊಂದಿದ್ದರು. ಉದಕ ಮಂಡಲದಲ್ಲಿ ಅವರಿಗೆ ಡಾ॥ ಛಾಬ್ರಾ, ಶ್ರೀ ಎನ್. ಲಕ್ಷ್ಮೀ ನಾರಾಯಣರಾವ ಮತ್ತು ಡಾ॥ ಡಿ.ಸಿ. ಸರ್ಕಾರ ಮುಂತಾದ ನಿಷ್ಣಾತ ಶಾಸನ ಮಾರ್ಗದರ್ಶನದಲ್ಲಿ ಕೆಲಸ ಮಾಡುವ ಸಂಗಡಿಗರೊಡನೆ ವಿಚಾರ ವಿನಿಮಯ ಮಾಡುವ ಸುಸಂಧಿ ದೊರೆಯಿತು"[೬೦]

ಉದಕ ಮಂಡಲದ ಕಛೇರಿಯಲ್ಲಿ ಅಶೋಕನ ಶಾಸನಗಳಿಂದ ಹಿಡಿದು ತೀರ ಅರ್ವಾಚೀನ ಕಾಲದ ಸಾವಿರಾರು ಶಾಸನಗಳ ಕಾಗದದ ಮೇಲೆ ಮುದ್ರಿಸಿಕೊಂಡ ಪುಟಗಳು ಲಭ್ಯವಾದವು. ದೇಸಾಯಿಯವರು ತಮ್ಮ ಇಲಾಖೆಯ ಪ್ರಕಟಣೆಗಳಾದ ಶಾಸನ ಶಾಸ್ತ್ರದ ವಾರ್ಷಿಕ ವರದಿಗಳಿಗೆ ದಕ್ಷಿಣ ಭಾರತದ ಶಾಸನ ಮೊದಲಾದ ಮತ್ತು ಎ.ಪಿ. ಗ್ರಾಫೀಯ ಇಂಡಿಕಾದ ಸಂಪುಟಗಳಿಗೆ ಗಣ್ಯ ಸೇವೆ ಸಲ್ಲಿಸಿದ್ದಾರೆ. ೧೯೬೨ರಲ್ಲಿ ನಿವೃತ್ತರಾದ ಮೇಲೆ ಇವರು ಭಾರತದ ಇತಿಹಾಸ ಶಾಸನಶಾಸ್ತ್ರದ ಮತ್ತು ನಾಣ್ಯಶಾಸ್ತ್ರದ ವಿಭಾಗಕ್ಕೆ ಮುಖ್ಯಸ್ಥರಾದರು. ಇವರ ಕಾಲಕ್ಕೆ ಕನ್ನಡ ಸಂಶೋಧನೆಯ ಸಂಸ್ಥೆಯ ವಸ್ತು ಸಂಗ್ರಹಾಲಕ್ಕೆ ಸೇರಿದ ಮುಖ್ಯವಸ್ತುಗಳು ಸನ್ನತಿಯಿಂದ ತಂದ ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಒಂದು ಕಲ್ಲು, ಕೆಲವು ನಾಣ್ಯ ತಾಮ್ರಪಟಗಳೆಂದು ಹೇಳಬಹುದು.

**".ಬಿ. ದೇಸಾಯಿರವರ ಶಾಸನ ಶಾಸ್ತ್ರದ ಗ್ರಂಥಗಳು:**

- ಕೊಪ್ಪಳ ಜಿಲ್ಲೆಯ ಶಾಸನಗಳು ೧೯೬೫ರಲ್ಲಿ ಕರ್ನಾಟಕ ಇತಿಹಾಸ ಸಂಶೋಧಕ ಮಂಡಲ ಪ್ರಕಟಿಸಿದ ಈ ಪುಸ್ತಕದಲ್ಲಿ ೫೩ ಶಾಸನಗಳ ಸಂಗ್ರಹವಿದೆ.
- ದಿ ಕಾರ್ಪಸ್ ಆಫ್ ಇನ್‌ಸ್ಕ್ರಿಪ್ಸನ್ಸ್ ಇನ್ ದಿ ಕನ್ನಡ ಡಿಸ್ಟ್ರಿಕ್ಟ್ಸ್ ಆಫ್ ಹೈದ್ರಾಬಾದ ಸ್ಟೇಟ್. ಈ ಸಂಪುಟವನ್ನು ದೇಸಾಯಿಯವರು ಹೈದ್ರಾಬಾದ ಸರ್ಕಾರಕ್ಕೆ ಸಂಪಾದಿಸಿ ಕೊಟ್ಟಿದ್ದಾರೆ.
- ಬಸವೇಶ್ವರ ಆಂಡ್ ಹಿಜ್ ಟೈಮ್ಸ್ ೧೯೬೮ರಲ್ಲಿ ಬರೆದ ಈ ಗ್ರಂಥವನ್ನು ಸಿದ್ಧಪಡಿಸಲು ದೇಸಾಯಿಯವರು ವೀರಶೈವ ಸಾಹಿತ್ಯ ಮತ್ತು ಬಸವೇಶ್ವರರಿಗೆ ಸಂಬಂಧಿಸಿದ ಶಾಸನ ಮತ್ತು ಸ್ಥಳಗಳ ಅಭ್ಯಾಸ ಮಾಡಿದ್ದಾರೆ.
- ಕನ್ನಡ ಇನ್‌ಸ್ಕ್ರಿಪ್ಸನ್ಸ್ ಆಫ್ ಆಂಧ್ರ ಪ್ರದೇಶ.
- ಸೆಲೆಕ್ಟ್ ಸ್ಟೋನ ಇನ್‌ಸ್ಕ್ರಿಪ್ಸನ್ಸ್ ಆಫ್ ಆಂಧ್ರ ಪ್ರದೇಶ"[೬೧]

**ಮರಣ:**

ಪ್ರತಿಭಾವಂತರಾದ ಡಾ॥ ಪಾಂಡುರಂಗ ಭೀಮರಾವ ದೇಸಾಯಿಯವರು ೧೯೭೪ರ ಮಾರ್ಚ್ ೫ ರಂದು ಹೃದಯ ಘಾತದಿಂದ ನಿಧನರಾದರು.

**ವ್ಯಕ್ತಿತ್ವ:**

ಸರಳ ಸ್ವಭಾವದವರಾಗಿದ್ದ ಪಿ.ಬಿ. ದೇಸಾಯಿಯವರು ಉತ್ತಮ ಇತಿಹಾಸಕಾರರಾಗಿ ಇವರು ಕರ್ನಾಟಕ ಇತಿಹಾಸದಲ್ಲಿ ಪ್ರಮುಖವಾಗಿ ಶಾಸನಗಳ ಅಧ್ಯಯನ ಮಾಡಿದ ಮಹಾನ್ ಧೀಮಂತ ಇತಿಹಾಸಕಾರರಾಗಿದ್ದಾರೆ. ಇವರು ಕರ್ನಾಟಕ ಚರಿತ್ರೆಗೆ ಸಲ್ಲಿಸಿದ ಸೇವೆ ಅಪಾರ ಮಹತ್ವದಾಗಿದೆ. ಇವರು ಹೈದ್ರಬಾದ ಕರ್ನಾಟದಲ್ಲಿ ಜನಿಸಿ ಹಲವಾರು ಶಾಸನಗಳು ಅಧ್ಯಯನ ಮಾಡುವುದರ ಜೊತೆಗೆ ಸುಮಾರು ೪೦೦ ಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದ್ದಾರೆ.

**

## ೧೪. ಜಿ.ಎಸ್. ಗಾಯ್ ಕ್ರಿ.ಶ. ೧೯೨೨-೧೯೭೬

**ಪರಿಚಯ :**

ಇವರು ಭಾರತೀಯ ಶಾಸನಕಾರರಾಗಿ, ಲಿಪಿಕಾರರಾಗಿ ಮತ್ತು ಇತಿಹಾಸಕಾರರಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ಜೊತೆಗೆ ಇವರು ಕರ್ನಾಟಕ ಚರಿತ್ರೆಗೆ ಅಪಾರವಾದ ಸೇವೆಯನ್ನು ಸಲ್ಲಿಸಿದ ಮಹಾನ್ ಇತಿಹಾಸಕಾರರಲ್ಲಿ ಇವರು ಒಬ್ಬರು. .

**ಜಿ.ಎಸ್. ಗಾಯ್‌ಯವರ ಸಾಧನೆ :**

"ಜಿ.ಎಸ್. ಗಾಯ್ ಯವರು ಭಾರತೀಯ ಶಾಸನಕಾರರಾಗಿ, ಲಿಪಿಶಾಸ್ತ್ರಜ್ಞರಾಗಿ ಮತ್ತು ಇತಿಹಾಸಕಾರರಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ಇವರು ವಿಶೇಷವಾಗಿ ಪೂರ್ವಮಧ್ಯಕಾಲಿನ ಕನ್ನಡ ಭಾಷೆ ಶಾಸನಗಳ ಮೇಲೆ ತಮ್ಮ ಪಾಂಡಿತ್ಯ ಸಾಧಿಸಿದ್ದಾರೆ. ಇವರು ೧೯೬೨ ರಿಂದ ೧೯೭೬ ರ ವರೆಗೆ ಆರ್ಕಿಯಾಲಾಜಿಕಲ್ ಸರ್ವೆ ಆಫ್ ಇಂಡಿಯಾ ವಿಭಾಗದ ಮುಖ್ಯ ಶಾಸನಕಾರರಾಗಿ ಸೇವೆಯನ್ನು ಸಲ್ಲಿಸಿರುತ್ತಾರೆ"೬೨.

ಜಿ.ಎಸ್. ಗಾಯ್ ರವರು ೧೯೪೫ ರಲ್ಲಿ ಡೆಕ್ಕನ್ ಕಾಲೇಜ್ ಆಫ್ ಪೋಸ್ಟ್ ಗ್ರಾಜ್ಯುಯೇಷನ್ ಸಂಸ್ಥೆಯಲ್ಲಿ ಡೆಕ್ಕನ್ ಕಾಲೇಜಿನ ಸಂಶೋಧನಾ ಮತ್ತು ಸರ್ವೇಕ್ಷಣಾ ಸಂಸ್ಥೆಯಲ್ಲಿ ಕನ್ನಡ ಭಾಷೆ ಶಾಸನಕಾರರಾಗಿ ಸೇವೆಯನ್ನು ಸಲ್ಲಿಸಿ, ಸಂಶೋಧನಾ ವಿದ್ಯಾರ್ಥಿ ವೇತನಕ್ಕೆ ಆಯ್ಕೆಯಾದರು. ಈ ಮೊದಲೇ ಎ.ಎನ್. ನರಸಿಂಹಯ್ಯನವರು ಲಂಡನ್ ವಿಶ್ವವಿದ್ಯಾಲಯದಲ್ಲಿ ಮಂಡಿಸಿರುವ ಸಂಶೋಧನಾ ಪ್ರಬಂಧ "ಎ ಗ್ರಾಮರ್ ಆಫ್ ದಿ ಓಲ್ಡೆಸ್ಟ್ ಕ್ಯಾನರೀಸ್ ಇನ್‌ಕ್ರೀಪ್ಷನ್ಸ್" ಈ ವಿಷಯವನ್ನು ಕುರಿತು ಜಿ.ಎಸ್. ಗಾಯ್ ರವರು ಸಂಶೋಧನೆ ಮುಂದುವರೆಸಿದರು. ವಿಶೇಷವಾಗಿ ಇವರು ಪುರಾತನ ಕನ್ನಡ ಶಾಸನಗಳ ಮೇಲೆ (೬ನೇ ಮತ್ತು ೭ನೇ ಶತಮಾನದ) ಅಧ್ಯಯನ ಆರಂಭಿಸಿದರು.

ಇವರ ಕೃತಿಯು ನರಸಿಂಹಯ್ಯನವರು ಬಿಟ್ಟು ಹೋದ ೮, ೯ ಮತ್ತು ೧೦ನೇ ಶತಮಾನಗಳ ಶಾಸನಗಳ ಮೇಲೆ ವಿಶೇಷವಾಗಿ ಬೆಳಕನ್ನು ಚಲ್ಲುತ್ತದೆ. ಇವರು ತಮ್ಮ ಪಿ.ಹೆಚ್.ಡಿ. ಪದವಿಯನ್ನು "ಎ ಹಿಸ್ಟರಿಕಲ್ ಗ್ರಾಮರ್ ಆಫ್ ಓಲ್ಡ್ ಕನ್ನಡ" ಸಂಪೂರ್ಣವಾಗಿ "೮, ೯ ಮತ್ತು ೧೦ನೇ ಶತಮಾನಗಳ ಕನ್ನಡ ಶಾಸನಗಳನ್ನಾಧರಿಸಿದೆ" ಎಂಬ ಮಹಾಪ್ರಬಂಧ ಮಂಡಿಸಿದ್ದಾರೆ. ಇದಕ್ಕೆ ಮುಂಬೈ ವಿಶ್ವವಿದ್ಯಾಲಯ ಡಾಕ್ಟರೇಟ ಪದವಿ ನೀಡಿ ಗೌರವಿಸಿತು. ಇವರ ಪ್ರಬಂಧವನ್ನು ೧೯೪೬ ರಲ್ಲಿ ಪುನಾದ ಡೆಕ್ಕನ್ ಕಾಲೇಜಿನ ರೂಪದಲ್ಲಿ ಪ್ರಕಟಿಸಿತು. ಈ ಪುಸ್ತಕಕ್ಕೆ ಲಂಡನ್ ವಿಶ್ವವಿದ್ಯಾಲಯದ ಥಾಮಸ್ ಬ್ಯೂರೋ ಇನ್ ಬುಲೇಟನ್ ಆಫ್ ದಿ

ಸ್ಕೂಲ್ ಆಫ್ ಓರಿಯಂಟಲ್ ಆ್ಯಂಡ್ ಆಫ್ರಿಕನ್ ಸ್ಟಡೀಸ್ ಸಂಸ್ಥೆಯಿಂದ ಧನಾತ್ಮಕ ಪ್ರತಿಕ್ರಿಯೆ ದೊರೆಯಿತು. ಸಂಪುಟ ೧೨, ಸಂಖ್ಯೆ ೨, ಪುಟ ಸಂಖ್ಯೆ ೪೬೬-೪೬೭ ಇವುಗಳನ್ನು ಅಧ್ಯಯನ ಕ್ಷೇತ್ರದ ಪ್ರಾರಂಭ ಎಂದು ಕರೆಯಲಾಗಿದೆ.

೧೯೪೩ ರಲ್ಲಿ ಜಿ.ಎಸ್. ಗಾಯ್ ರವರು ಆರ್ಕಿಯಾಲಾಜಿಕಲ್ ಸರ್ವೆ ಆಫ್ ಇಂಡಿಯಾ ವಿಭಾಗದಲ್ಲಿ ಸೇರಿಕೊಂಡರು. ನಂತರ ಇವರು ೧೯೬೨ ರಲ್ಲಿ ಈ ವಿಭಾಗದ ಉನ್ನತ ಸ್ಥಾನವನ್ನು ಅಲಂಕರಿಸಿ ಭಾರತದ ಶಾಸನಕಾರರಾಗಿ ಬಡ್ತಿ ಪಡೆದರು.

೧೯೬೩ ರಲ್ಲಿ ಇವರ ಸ್ಥಾನ ಬದಲಾವಣೆ ಹೊಂದಿ, ಮುಖ್ಯ ಶಾಸನಕಾರರಾಗಿ ಬಡ್ತಿ ಪಡೆದು ಇವರು ೧೯೭೬ ರಲ್ಲಿ ನಿವೃತ್ತಿ ಹೊಂದುವರೆಗೆ ಮುಂದುವರೆದರು.

ಶಾಸನಕಾರರಾಗಿ ಇವರು ಹಲವಾರು ಶಾಸನಗಳನ್ನು ಸಂಶೋಧನಾ ಮಾಡುವ ಮೂಲಕ ಅವರು ಈ ಶಾಸನ ಕ್ಷೇತ್ರದಲ್ಲಿ ಗಣನೀಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ಮುಂದೆ ಇದೇ ಕ್ಷೇತ್ರದಲ್ಲಿ ಅಭಿವೃದ್ಧಿಯನ್ನು ಸಾಧಿಸಿದ ಮಹಾನ್ ಇತಿಹಾಸಕಾರರಾಗಿ ಹೊರ ಹೊಮ್ಮಿದ್ದಾರೆ.

ಇವರು ಪಿ.ಹೆಚ್.ಡಿ. ಪ್ರಬಂಧವನ್ನು ಹೊರತುಪಡಿಸಿ ಈ ಇತಿಹಾಸ ಕ್ಷೇತ್ರದಲ್ಲಿ ಹಲವಾರು ಕೃತಿಗಳನ್ನು ರಚಿಸಿದ್ದಾರೆ.

**"ಜಿ.ಎಸ್. ಗಾಯ್ ರವರ ಕೃತಿಗಳು :**

- ಇಂಟ್ರುಸಕ್ಷನ್ ಟು ಇಂಡಿಯಾನ್ ಎಪಿಗ್ರಾಫಿ (ವಿಶೇಷವಾಗಿ ಇವರು ಭಾಷೆ ಮತ್ತು ಲಿಪಿಗಳ ಅಭಿವೃದ್ಧಿ ೧೯೮೬ ಭಾರತೀಯ ಶಾಸನಗಳ ಪರಿಚಯ)
- ಸಮ್ ಸೆಲೆಕ್ಟೆಡ್ ಇನ್‌ಸ್ಕ್ರಿಪ್ಸೆನ್ಸ್ ೧೯೯೦ (ಕೆಲವು ಶಾಸನಗಳು)
- ಸ್ಟಡೀಸ್ ಇನ್ ಇಂಡಿಯನ್ ಹಿಸ್ಟರಿ ಎಪಿಗ್ರಾಫಿ ಆ್ಯಂಡ್ ಕಲ್ಚರ್ ೧೯೯೨.
- ಇನ್‌ಸ್ಕ್ರಿಪ್ಷೆನ್ಸ್ ಆಫ್ ದಿ ಅರ್ಲಿ ಕದಂಬಸ್ ೧೯೯೬. (ಆರಂಭಿಕ ಕದಂಬರ ಶಾಸನಗಳು)
- ಇಂಡಿಯನ್ ಎಪಿಗ್ರಾಫಿ (ಭಾರತೀಯ ಶಾಸನಶಾಸ್ತ್ರ ಇದು ಇತಿಹಾಸ ಕಲೆಯು ಒಳಗೊಂಡಿದೆ)
- ಇವರು ಸಂಶೋಧನಾ ಪತ್ರಿಕೆಗಳು, ಇತಿಹಾಸ, ಶಾಸನ, ಭಾಷೆ, ಪ್ರಾಚ್ಯ ವಸ್ತುಗಳ ಮೇಲೆ ೧೦೦ ಕ್ಕಿಂತ ಹೆಚ್ಚಿನ ಸಂಶೋಧನಾ ಪ್ರಬಂಧಗಳನ್ನು ಮಂಡಿಸಿದ್ದಾರೆ.

- ಇವರು ದಕ್ಷಿಣ ಭಾರತದ ಶಾಸನಗಳ ಸಂಪುಟ ೨೦ ಅನ್ನು ಸಂಪಾದಿಸಿದ್ದಾರೆ.
- ಆರ್ಕಿಯಾಜಿಕಲ್ ಸರ್ವೆ ಆಫ್ ಇಂಡಿಯಾ ಪ್ರಕಟಿಸಿ ಸಂಪುಟ ೩೫ ರಿಂದ ೩೮ ರ ವರೆಗಿನ ಎಪಿಗ್ರಾಫಿಯಾ ಇಂಡಿಕಾ ಎಂಬ ಪುಸ್ತಕ ಸಂಪಾದಿಸಿದ್ದರು.
- ಇವರು ರಿವೈಜ್ಡ್ ಕಾರ್ಪಸ್ ಇನ್‌ಸ್ಕ್ರಿಪ್ಸಿಯನ್ ಇಂಡಿಕೋರಮ್‌ನ ೩ನೇ ಸಂಪುಟದ ಸಹ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ.[೬೩]

ಹೀಗೆ ಜಿ.ಎಸ್. ಗಾಯ್ ರವರು ತಮ್ಮ ಕೃತಿಗಳ ಮೂಲಕ ಕರ್ನಾಟಕ ಕದಂಬರ ಶಾಸನಗಳನ್ನು ಕುರಿತು ವ್ಯಕ್ತಪಡಿಸಿದ್ದರು.

**ವ್ಯಕ್ತಿತ್ವ :**

ಜಿ.ಎಸ್. ಗಾಯ್ ರವರು ಕರ್ನಾಟಕ ಇತಿಹಾಸಕಾರರಲ್ಲಿ ಒಬ್ಬರು. ಇವರು ಶಾಸನಕಾರ ಮತ್ತು ಲಿಪಿಕಾರರಾಗಿ ಹಲವಾರು ಸಂಶೋಧನಾ ಗ್ರಂಥಗಳನ್ನು ಮಂಡಿಸಿದ್ದಾರೆ. ಜೊತೆಗೆ ತಮ್ಮ ಕೃತಿಗಳನ್ನು ಕದಂಬರಿಗೆ ಸಂಬಂಧಪಟ್ಟ ಕೃತಿಗಳನ್ನು ಪ್ರಕಟಿಸಿ ಇವರು ಕರ್ನಾಟಕ ಚರಿತ್ರೆಗೆ ಅಪಾರ ಕೊಡುಗೆಯನ್ನು ಸಲ್ಲಿಸಿದ್ದಾರೆ.

**

# ೧೫. ಎಂ. ಎಂ. ಕಲಬುರ್ಗಿ



ಎಂ. ಎಂ. ಕಲಬುರ್ಗಿ

**ಪರಿಚಯ:**

ಎಂ.ಎಂ. ಕಲಬುರ್ಗಿಯವರು ಕನ್ನಡ ಪ್ರಾಧ್ಯಾಪಕರಾಗಿದ್ದು, ಅವರು ಕರ್ನಾಟಕ ಚರಿತ್ರೆಗೆ ಅಪಾರವಾದ ಸೇವೆಯನ್ನು ಸಲ್ಲಿಸಿದ್ದಾರೆ. ಇವರ ಗ್ರಂಥಗಳಲ್ಲಿ ಶಾಸಗಳು ಮತ್ತು ಶಿವಶರಣಿಯರ ಶಾಸನಗಳ ಕುರಿತು ಮಾಹಿತಿಯನ್ನು ನೀಡಿದ ಒಬ್ಬ ಪ್ರಮುಖ ಚರಿತ್ರೆಕಾರರಾಗಿದ್ದಾರೆ. ಹಾಗೂ ಇವರು ಸಂಶೋಧಕರೆಂದು ಪ್ರಖ್ಯಾತ ಪಡೆದರು.

**ಜನನ :**

ಎಂ.ಎಂ. ಕಲಬುರ್ಗಿಯವರು ೨೮-೧೧-೧೯೩೮ ರಂದು ಗುಲಬರ್ಗಾ ಜಿಲ್ಲೆಯ ಗುಬ್ಬೆವಾಡ ಎಂಬಲ್ಲಿ ಜನಿಸಿದ್ದರು. ಇವರ ಪೂರ್ಣ ಹೆಸರು ಶ್ರೀ ಮಲ್ಲಪ್ಪಾ ಮಂಡವಾಳಪ್ಪ ಕಲಬುರ್ಗಿ.

**ಶಿಕ್ಷಣ :**

"ಎಂ.ಎಂ. ಕಲಬುರ್ಗಿಯವರು ತಮ್ಮ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ಹುಬ್ಬೆವಾಡದಲ್ಲಿ ಆರಂಭಿಸಿ ನಂತರ ಅವರು ಉನ್ನತ ಶಿಕ್ಷಣವನ್ನು ಪಡೆಯಲು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಲ್ಲಿ ಎಂ.ಎ ಪದವಿ ಪಡೆದು, ನಂತರ ಪಿ.ಎಚ್.ಡಿ. ಯನ್ನು ಪಡೆದುಕೊಂಡರು"[೨೪].

**ಸಲ್ಲಿಸಿದ ಸೇವೆ:**

"ಇವರು ಕಲಬುರ್ಗಿ ವಿಶ್ವ ವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕರಾಗಿ ವೃತ್ತಿ ಜೀವನವನ್ನು ಆರಂಭಿಸಿದರು. ಇವರು ಸಂಶೋಧಕರು ಹಾಗೂ ಸಂಪಾದಕರಾಗಿದ್ದರು. ಇವರು ಸಂಶೋಧನಾ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆ ಗಣನೀಯವಾಗಿದೆ. ಇವರು ಸುಮಾರು ೨೦ ಕ್ಕೂ ಹೆಚ್ಚು ವಿದ್ವತ್ ಪೂರ್ಣ ಕೃತಿಗಳನ್ನು ರಚಿಸಿದ್ದಾರ"[೨೫].

**"ಕೃತಿಗಳು :**

- ಶಾಸನ ಸಂಪದ (೧)
- ಶಾಸನಗಳಲ್ಲಿ ಶಿವಶರಣರು
- ಶಾಸನ ವ್ಯಾಸಂಗ"[೨೬]

ಇವು ಇವರ ಸಂಶೋಧನಾ ಕೃತಿಗಳಾಗಿವೆ. ನಂತರ ಎಂ.ಎಂ. ಕಲಬುರ್ಗಿಯವರು ಕವಿರಾಜ ಮಾರ್ಗ, "ಪರಿಸರದ ಕನ್ನಡ ಸಾಹಿತ್ಯ ಇದು ಅವರ ಪಿ.ಎಚ್.ಡಿ. ಪ್ರಬಂಧವಾಗಿದೆ"[೬೦].

ಅಲ್ಲದೇ ಸಮಗ್ರ ವಚನ ಸಾಹಿತ್ಯ ಮಾತಿಯ ಪ್ರಧಾನ ಸಂಪಾದಕರಾಗಿ ಕೆಲಸ ಮಾಡಿರುವ ಕಲಬುರ್ಗಿಯವರು, ವೈಜ್ಞಾನಿಕ ಸಂಶೋಧನೆ ಸಂಪಾದನೆಗೆ ಹೆಸರಾದರು. ಸದಾ ಕ್ರಿಯಾಶೀಲ ವ್ಯಕ್ತಿತ್ವ ಚಟುವಟಿಕೆಯ ಇವರು ಸದಾ ಸಂಶೋಧನಾ ಪ್ರವೃತ್ತಿಯವರು.

ಇವರು ಎಲ್ಲರಿಗೂ ಒಗ್ಗದ ಸಂಶೋಧನೆಯನ್ನು, ಇವರು ಒಗ್ಗಿಸಿ ಕೊಂಡಿರುವುದೇ ಒಂದು ವಿಶೇಷ 'ಶಾಸನಗಳಲ್ಲಿ ಶಿವಶರಣರು'[೬೧].

ಪ್ರಶಸ್ತಿಗಳು :

"೧) ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

೨) ಶ್ರೀ ಜಯಚಾಮರಾಜ ಒಡೆಯರ್ ಪಾರಿತೋಷಕ ಪ್ರಶಸ್ತಿ"[೬೨]

ಹೀಗೆ ಎಂ.ಎಂ. ಕಲಬುರ್ಗಿಯವರು ಹಲವಾರು ಪುರಸ್ಕಾರಗಳು ಪಡೆದುಕೊಂಡರು.

ಎಂ.ಎಂ. ಕಲಬುರ್ಗಿಯವರು ಕರ್ನಾಟಕ ವಿಶ್ವ ವಿದ್ಯಾಲಯದಲ್ಲಿ ಇತಿಹಾಸಕ್ಕೆ ಸಂಬಂಧಿಸಿದ ಶಾಸನಗಳ ಕುರಿತು ಸಂಶೋಧನೆ ಮಾಡಿದ್ದರು. ಇವರು ಚರಿತ್ರೆಯ ಬಗ್ಗೆ ಅಭಿಮಾನದಿಂದ ಮಾಡಿದ ಸಾಧನೆಯು ಚಿರಸ್ಮರಣೀಯವಾಗಿದೆ ಎಂದು ಹೇಳಬಹುದು. ಅವರು ಪ್ರಸ್ತುತ ಧಾರವಾಡದಲ್ಲಿ ಇದ್ದಾರೆ. ಅವರ ಸಾಧನೆಯು ಇನ್ನೂ ಉನ್ನತ ಮಟ್ಟಕ್ಕೆ ಬೆಳೆಯುತ್ತದೆ. ಇಂತಹ ಧೀಮಂತ ಪಂಡಿತರು ಚರಿತ್ರೆಗೆ ನೀಡಿದ ಕೊಡಗೆ ಗಣನೀಯವಾಗಿದೆ.

**

# ೧೬. ಪ್ರೊ|. ಬಿ.ಪಿ. ಹೂಗಾರ

**ಪರಿಚಯ:**



**ಪ್ರೊ|. ಬಿ.ಪಿ. ಹೂಗಾರ**

ಬಿ.ಪಿ. ಹೂಗಾರ ರವರು ಕರ್ನಾಟಕ ಇತಿಹಾಸಕರಾರಲ್ಲಿ ಒಬ್ಬರು ಪ್ರತಿಭಾವಂತರಾದ ಇವರು ಮಾಧ್ಯಮ ಕುಟುಂಬದಲ್ಲಿ ಜನಿಸಿ ಇವರು ಕರ್ನಾಟಕ ಚರಿತ್ರೆಗೆ ಸಂಬಂಧಿಸಿದಂತೆ, ಹಲವಾರು ಗ್ರಂಥಗಳನ್ನು ರಚಿಸಿ ಇತಿಹಾಸ ಕ್ಷೇತ್ರಕ್ಕೆ ಅಪಾರವಾದ ಸೇವೆಯನ್ನು ಸಲ್ಲಿಸಿದ್ದಾರೆ. ಇವರು ತಮ್ಮ ಸೇವೆಯನ್ನು ಪ್ರದರ್ಶಿಸಿಸಿ ಇತಿಹಾಸಕಾರರೆಂದು ಪ್ರಖ್ಯಾತ ಪಡೆದುಕೊಂಡರು.

**ಜನನ:**

ಇವರ ಪೂರ್ಣ ಹೆಸರು ಭೀಮಣ್ಣಾ. ಪಿ. ಹೂಗಾರ ಇವರು ೧೯೫೨ ಜನೇವರಿ ೧೨ ರಂದು ಸುರಪೂರದಲ್ಲಿ ಜನಿಸಿದರು. ತಂದೆ ಫಕೀರಪ್ಪಾ ತಾಯಿ ಬಸಮ್ಮಾ.

**ಶಿಕ್ಷಣ:**

ಇವರು ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ತಮ್ಮ ಸ್ವ-ಗ್ರಾಮದಲ್ಲಿ ಮುಗಿಸಿದ್ದರು. ನಂತರ ಅದೇ ಸುರುಪೂರು ಕಾಲೇಜಿನಲ್ಲಿ ಪಿ.ಯು.ಸಿ. ಮುಗಿಸಿ ನಂತರ ಸರ್ಕಾರಿ ಪ್ರಥಮ ದರ್ಜೆ ಕಾಲೇಜ್ ಸುರುಪರೂನಲ್ಲಿ ತಮ್ಮ ಪದವಿಯನ್ನು ಮುಗಿಸಿದ್ದರು.

**ಉನ್ನತ ಶಿಕ್ಷಣ**

ಬಿ.ಪಿ. ಹೂಗಾರವರು ತಾವು ಪದವಿಯನ್ನು ಮುಗಿಸಿದ ನಂತರ ೧೯೭೫ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ. ಪದವಿಯನ್ನು ಪಡೆದುಕೊಂಡರು.

**ಸರ್ಕಾರಿ ಸೇವೆ:**

ಬಿ.ಪಿ. ಹೂಗಾರವರು ೧೯೭೫ರಲ್ಲಿ ತಮ್ಮ ಎಂ.ಎ. ಪದವಿಯನ್ನು ಮುಗಿಸಿದ ನಂತರ ೧೯೭೬ರಲ್ಲಿ ಕರ್ನಾಟಕ ಲೋಕ ಸೇವಾ ಆಯೋಗದಿಂದ ಇತಿಹಾಸ ಉಪನ್ಯಾಸಕರಾಗಿ ಸೇವೆಗೆ ಆಯ್ಕೆಯಾದರು. ಇವರು ೩೩ ವರ್ಷ ಸೇವೆಯನ್ನು ಸಲ್ಲಿಸಿರುತ್ತಾರೆ. ಹಾಗೆ ಹಲವಾರು ಕಡೆ ಗ್ರೇಡ್ ೨ ಪ್ರಾಂಶುಪಾಲರೆಂದು ಸೇವೆಯನ್ನು ಸಲ್ಲಿಸುತ್ತಿದ್ದಾರೆ.

**ಕೌಟುಂಬಿಕ ಜೀವನ:**

ಬಿ.ಪಿ. ಹೂಗಾರವರ ಕುಟುಂಬದಲ್ಲಿ ದಂಪತಿಗಳು, ಅವರ ಮೂರು ಜನ ಹೆಣ್ಣು ಮಕ್ಕಳು ಹಾಗೂ ಒಬ್ಬ ಗಂಡು ಮಗ ಇದ್ದಾರೆ. ಇವರು ತಮ್ಮ ಜೀವನವು ಸಂತೋಷಕರವಾಗಿ ಕಾಲ ಕಳೆಯುತ್ತಿದ್ದಾರೆ.

**ದಿನಚರಿ:**

ಪಿ.ಬಿ. ಹೂಗಾರವರು ತಮ್ಮ ಜೀವನದಲ್ಲಿ ಬಹಳಷ್ಟು ಅಚ್ಚುಕಟ್ಟಾಗಿ ನಡೆದುಕೊಂಡಿರುತ್ತಾರೆ. ಅವರು ದಿನಾಲು ಬೆಳಿಗ್ಗೆ ೫.೦೦ ಗಂಟೆಗೆ ಏಳುವುದು, ೬.೩೦ರ ವರೆಗೆ ವಾಕಿಂಗ್ ಮುಗಿಸಿ ನಂತರ ೮.೦೦ ಗಂಟೆಯ ವರೆಗೆ ಪೂಜೆಯನ್ನು ಮುಗಿಸುವರು. ನಂತರ ೯.೩೦ ಗಂಟೆಗೆ ಕಾಲೇಜಿಗೆ ಬಂದು ೫.೩೦ರ ವರೆಗೆ ಕಾಲೇಜಿನಲ್ಲಿ ಸೇವೆಯನ್ನು ಸಲ್ಲಿಸುವರು. ಸಾಯಂಕಾಲ ೭.೦೦ ಗಂಟೆಗೆ ಮನೆಯಲ್ಲಿ ವಿಶ್ರಾಂತಿ ಪಡೆಯುವರು. ೮.೦೦ ರಿಂದ ೯.೦೦ ಗಂಟೆಯ ವರೆಗೆ ಟಿ.ವಿ. ನೋಡುವುದು, ೯.೦೦ ರಿಂದ ೧೧.೦೦ ಗಂಟೆಯ ವರೆಗೆ ಓದುವದು, ೧೧.೦೦ ಗಂಟೆಗೆ ಮಲಗುವರು.

**ಕೃತಿಗಳು:**

- ಕರ್ನಾಟಕ ಇತಿಹಾಸ.
- ಪ್ರಾಚೀನ ಭಾರತದ ಇತಿಹಾಸ.
- ಮಧ್ಯಕಾಲಿನ ಭಾರತದ ಇತಿಹಾಸ.
- ಆಧುನಿಕ ಭಾರತದ ಇತಿಹಾಸ.
- ಯೂರೋಪಿನ ಇತಿಹಾಸ.
- ಭಾರತದ ಇತಿಹಾಸ (ಆರಂಭದಿಂದ ೧೫೨೬ರ ವರೆಗೆ)
- ೧೫೨೬ ರಿಂದ ೧೭೦೭ರ ವರೆಗೆ ಭಾರತ ಇತಿಹಾಸ)
- ಭಾರತದ ಇತಿಹಾಸ (೧೭೦೭ ರಿಂದ ೧೯೬೪ರ ವರೆಗೆ)
- ಪದವಿ ವಿದ್ಯಾರ್ಥಿಗಳಿಗೆ ಸಂಬಂಧಿಸಿದಂತೆ ಹಲವಾರು ಸೆಮಿಸ್ಟರ್

ಎ) ಪ್ರಾಚೀನ ಭಾರತದ ಇತಿಹಾಸ. (ಬಿ.ಎ.೧ನೇ ಸೆಮಿಸ್ಟರ್, ೨ನೇ ಸೆಮಿಸ್ಟರ್)

ಬಿ) ಮಧ್ಯಕಾಲಿನ ಇತಿಹಾಸ (ಬಿ.ಎ. ೩ನೇ ಸೆಮಿಸ್ಟರ್, ೪ನೇ ಸೆಮಿಸ್ಟರ್.)

ಸಿ) ಆಧುನಿಕ ಭಾರತದ ಇತಿಹಾಸ (ಬಿ.ಎ.೫ನೇ ಸೆಮಿಸ್ಟರ್, ೬ನೇ ಸೆಮಿಸ್ಟರ್)

**ಪ್ರಶಸ್ತಿಗಳು:**

ಪ್ರೊ॥ ಬಿ.ಪಿ. ಹೂಗಾರವರು ಹಲವಾರು ಗ್ರಂಥಗಳನ್ನು ರಚಿಸುವುದರ ಜೊತೆಯಲ್ಲಿ ಅವರು "ಉತ್ತಮ ನಾಗರಿಕ ಸೇವಾ ಪ್ರಶಸ್ತಿ" ದೆಹಲಿ ಪಬ್ಲಿಕೆಶನ್ಸ್ ಪ್ರಶಸ್ತಿ ಪಡೆದುಕೊಂಡರು.

**ಐತಿಹಾಸಿಕ ಸಾಧನೆ:**

ಪ್ರೊ|| ಬಿ.ಪಿ. ಹೂಗಾರ ರವರು ಇತಿಹಾಸ ವಿಷಯದಲ್ಲಿ ಉಪನ್ಯಾಸಕರಾಗಿ ಆಯ್ಕೆಯಾದ ನಂತರ ಅವರು ಇತಿಹಾಸದಲ್ಲಿ ಅಪಾರ ಅನುಭವ ಪಡೆದುಕೊಂಡು ಗಣನಿಯವಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ೨೧ ಗ್ರಂಥಗಳು ಹಾಗೂ ಸುರಪೂರ ಚರಿತ್ರೆಗೆ ಸಂಬಂಧಿಸಿದಂತೆ ಆರ್ಟಿಕಲ್ಸ್ ರಚಿಸಿದ್ದಾರೆ. ಹಾಗೂ ಕರ್ನಾಟಕ ಚರಿತ್ರೆಗೆ ಸಂಬಂಧಿಸಿದಂತೆ ಪುಸ್ತಕವನ್ನು ರಚಿಸಿರುತ್ತಾರೆ.

**ಸಾಮಾಜಿಕ ಸೇವೆ:**

ತಮ್ಮ ವೃತಿ ಜೀವನದಲ್ಲಿ ವಿದ್ಯಾರ್ಥಿಗಳ ಸಮುದಾಯಕ್ಕೆ ಸಹಾಯ ಮಾಡುವದರ ಜೊತೆಯಲ್ಲಿ ಹಲವಾರು ಸ್ಥಳಗಳಲ್ಲಿ ಪ್ರಾಂಶುಪಾಲರಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ಮೊದಲು ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಬೀದರನಲ್ಲಿ ಪ್ರಾಂಶುಪಾಲರಾಗಿ ಸೇವೆಯನ್ನು ಆರಂಭಿಸಿ, ನಂತರ ಶಾಹಪೂರ, ಸುರುಪೂರ, ಬಳ್ಳಾರಿ, ಚಿತ್ರದುರ್ಗಾ ಮುಂತಾದ ಕಡೆ ಅವರು (ಗ್ರೆಡ್ ೨) ಪ್ರಾಂಶುಪಾಲರಾಗಿ ಸೇವೆಯನ್ನು ಸಲ್ಲಿಸಿದ್ದಾರೆ.

**ಐತಿಹಾಸಿಕ ತಾಣಗಳಿಗೆ ಭೇಟಿ**

ಪ್ರೊ|| ಬಿ.ಪಿ. ಹೂಗಾರವರು ಒಬ್ಬ ಐತಿಹಾಸಕ ಉಪನ್ಯಾಸಕರಾಗಿ ಅದೇ ವಿಷಯದಲ್ಲಿ ಆಸಕ್ತಿ ಹೊಂದಿರುವ ಇವರು ತಮ್ಮ ಜೀವನದಲ್ಲಿ ಹಲವಾರು ಐತಿಹಾಸಿಕ ಸ್ಥಳಗಳಿಗೆ ಭೇಟಿ ನೀಡಿರುತ್ತಾರೆ. ಆ ಸ್ಥಳಗಳೆಂದರೆ ಮೈಸೂರು, ದೆಹಲಿ, ಹಂಪಿ, ಶ್ರಾವಣ ಬೆಳಗೊಳ, ಉದಯಪುರ, ಬೇಲೂರು, ಹಳೆಬೀಡು, ಬೀದರ, ಬಸವಕಲ್ಯಾಣ, ಲೇಪಾಕ್ಷಿ, ಬಳ್ಳಾರಿ, ಮಧುರೈ, ರಾಮೇಶ್ವರ, ಕುಂಭಕೋಣ ಮುಂತಾದ ಐತಿಹಾಸಿಕ ಸ್ಥಳಗಳಿಗೆ ಭೇಟಿ ನೀಡುವುದರ ಜೊತೆಗೆ ಅನುಭವ ಕೂಡ ಹೊಂದಿರುತ್ತಾರೆ.

**ಐತಿಹಾಸಿಕ ಸಂಪನ್ಮೂಲ ಸಂಗ್ರಹಣೆ:**

ಪ್ರೊ|| ಬಿ.ಪಿ. ಹೂಗಾರ ರವರು ಇತಿಹಾಸಕ್ಕೆ ಸಂಬಂಧಿಸಿದಂತೆ ಹೆಚ್ಚು ಹೆಚ್ಚು ಸಂಪನ್ಮೂಲಗಳನ್ನು ಸಂಗ್ರಹಣೆ ಮಾಡಿರುತ್ತಾರೆ. ಅವುಗಳೆಂದರೆ;

೧) ಭಾರತೀಯ ವಿದ್ಯಾ ಭೂಮಿ.
೨) ಕರ್ನಾಟಕ ಚರಿತ್ರೆ ಮಾಲೆ.(ಪ್ರಕಟಣೆ ಹಂಪಿ ವಿಶ್ವವಿದ್ಯಾಲಯ)
೩) ಇಂಗ್ಲೀಷ ಪುಸ್ತಕಗಳು.

**ಐತಿಹಾಸಿಕ ಕಲೆ, ವಾಸ್ತುಶಿಲ್ಪ ಮತ್ತು ಸಂಸ್ಕೃತಿಗಳು ಕಣ್ಮರೆಯಾಗುತ್ತಿವೆ. ಇದಕ್ಕೆ ಸಂಬಂಧಿಸಿದಂತೆ ಹೂಗಾರ ರವರ ಅಭಿಪ್ರಾಯ:**

ಪ್ರೊ॥ ಬಿ.ಪಿ. ಹೂಗಾರವರ ಪ್ರಕಾರ ಬರಿ ಇತಿಹಾಸಕಾರರಷ್ಟೆ ಅಲ್ಲದೆ, ಜನ ಸಾಮಾನ್ಯರೂ ಕೂಡ 'ಸ್ಮಾರಕಗಳು ತಮ್ಮ ಆಸ್ತಿಗಳೆಂದು' ತಿಳಿದುಕೊಂಡು ಅವುಗಳನ್ನು ಸಂರಕ್ಷಣೆ ಮಾಡಬೇಕು. ಹಾಗೂ ಪ್ರತಿಯೊಬ್ಬರಿಗೆ ಐತಿಹಾಸಿಕ ಸ್ಥಳಗಳ ಬಗ್ಗೆ ಅರಿವು ಮೂಡಿಸಿ, ಜವಾಬ್ದಾರಿಯುತವಾಗಿ ನಡೆದುಕೊಳ್ಳುವಂತೆ ಮಾಡಬೇಕು. ಅಂದಾಗ ಮಾತ್ರ ಈ ಸ್ಮಾರಕಗಳು ಮತ್ತು ಸಂಸ್ಕೃತಿಗಳನ್ನು ಸಂರಕ್ಷಣೆ ಮಾಡಬಹುದು ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**ಇತಿಹಾಸಕಾರರ ಜೊತೆ ಬಿ.ಪಿ. ಹೂಗಾರವರ ಸಂದರ್ಶನ :**

ಪ್ರೊ॥ ಬಿ.ಪಿ. ಹೂಗಾರವರು ಡಾ॥ ಕೆ.ವಿ. ಬಸವರಾಜ ಮತ್ತು ಡಾ॥ ಎಸ್. ಗುತ್ತಿಯವರೊಂದಿಗೆ ಸಂದರ್ಶನ ನಡೆಸಿದ್ದಾರೆ. ನಂತರ ಪಿ.ಬಿ. ದೇಸಾಯಿಯವರಿಂದ ಮಾರ್ಗದರ್ಶನವಾಯಿತು ಎಂದು ಹೇಳುತ್ತಾರೆ.

**ಇತಿಹಾಸ ಉಪನ್ಯಾಸಕರ ಸೇವೆಗೆ ಪ್ರೇರಣೆ:**

ಮೊದಲು ನಾನು ಪ್ರೊ॥ ಚಂದ್ರಶೇಖರ, ಎಸ್.ಬಿ. ಸೈನ್ಸ್ ಕಾಲೇಜ್ ಗುಲಬರ್ಗಾ ಇವರ ಪ್ರೇರಣೆಯಿಂದ ಇತಿಹಾಸ ಉಪನ್ಯಾಸಕನಾಗಿದ್ದೇನೆ.

**ಪ್ರಸ್ತುತ ಸೇವೆ:**

ಪ್ರೊ॥ ಬಿ.ಪಿ. ಹೂಗಾರವರು ಹಲವಾರು ಕಡೆ (ಗ್ರೇಡ್-೨) ಪ್ರಾಂಶುಪಾಲರಾಗಿ ಸೇವೆ ಸಲ್ಲಿಸಿ, ನಂತರ ಅವರು ಗುಲಬರ್ಗಾದ ಸರ್ಕಾರಿ ಪದವಿ ಮಹಾವಿದ್ಯಾಲಯದಲ್ಲಿ ದಿನಾಂಕ:೦೮.೦೬.೨೦೦೯ ರಿಂದ (ಗ್ರೆಡ್-೨) ಪ್ರಾಂಶುಪಾಲರಾಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

**ವ್ಯಕ್ತಿತ್ವ:**

ಸರಳ ಸ್ವಭಾವದವರಾದ ಪ್ರೊ॥ ಬಿ.ಪಿ. ಹೂಗಾರವರು ತಮ್ಮ ಜೀವನದಲ್ಲಿ ಇತಿಹಾಸ ಉಪನ್ಯಾಸಕರಾಗಿ ಸೇವೆ ಆರಂಭಿಸಿ ಇತಿಹಾಸ ಕ್ಷೇತ್ರದಲ್ಲಿ ಅಪಾರ ಅನುಭವನ್ನು ಪಡೆದು ೨೧ ಗ್ರಂಥಗಳನ್ನು ರಚಿಸಿದ್ದಾರೆ. ನಂತರ ಪ್ರಮುಖ ಇತಿಹಾಸಕಾರರ ಮಾರ್ಗದರ್ಶನ ಪಡೆದುಕೊಂಡು ಹಲವಾರು ಐತಿಹಾಸಿಕ ಸ್ಥಳಗಳಿಗೆ ಭೇಟಿ ನೀಡಿದ ಒಬ್ಬ ಪ್ರಮುಖ ಇತಿಹಾಸಕಾರೆಂದು ಹೇಳಬಹುದು. ಇವರು ಕರ್ನಾಟಕ ಚರಿತ್ರೆಗೆ ವಿಶೇಷ ಸೇವೆಯನ್ನು ಸಲ್ಲಿಸಿ ಕರ್ನಾಟಕ ಚರಿತ್ರೆಯ ಸಂಕ್ಷಿಪ್ತ ಮಾಹಿತಿಯನ್ನು ನೀಡಿದ್ದಾರೆ. ಇನ್ನೂ ಹೆಚ್ಚು ಇತಿಹಾಸ ಕ್ಷೇತ್ರಕ್ಕೆ ಅವರು ಸೇವೆಯನ್ನು ಸಲ್ಲಿಸಲೆಂದು ಹಾರೈಸುತ್ತೇನೆ.

**

# ೧೭. ಡಾ|| ಸರ್ವೋದಯ ಶಿವಪುತ್ರ ಎಸ್.

## ಪರಿಚಯ:


ಡಾ|| ಸರ್ವೋದಯ ಶಿವಪುತ್ರ ಎಸ್

ಡಾ|| ಸರ್ವೋದಯ ಶಿವಮತ್ರ ರವರು ಕರ್ನಾಟಕ ಇತಿಹಾಸಕಾರರಲ್ಲಿ ಒಬ್ಬರು. ಪ್ರತಿಭಾವಂತರಾದ ಇವರು ಬಡ ಕುಟುಂಬದಲ್ಲಿ ಜನಿಸಿ, ಇವರು ಇತಿಹಾಸ ಕ್ಷೇತ್ರಕ್ಕೆ ಸೇವೆಯನ್ನು ಸಲ್ಲಿಸಿ ನಂತರ ಕರ್ನಾಟಕ ಚರಿತ್ರೆಗೆ ಅಪಾರವಾದ ಕೊಡುಗೆಯನ್ನು ನೀಡಿರುತ್ತಾರೆ. ಇವರು ಕರ್ನಾಟಕ ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀ ರಂಗನಾಥ ರಾಮಚಂದ್ರ ದಿವಾಕರವರ ಜೀವನ ಚರಿತ್ರೆ ಬರೆದು ಕರ್ನಾಟಕ ಚರಿತ್ರೆಗೆ ಕೊಡುಗೆಯನ್ನು ಸಲ್ಲಿಸಿರುತ್ತಾರೆ.

**ಜನನ:**

ಪ್ರತಿಭಾವಂತರಾದ ಡಾ|| ಸರ್ವೋದಯ ಶಿವಪುತ್ರರವರು ತಂದೆ ಸಿದ್ಧಪ್ಪಾ, ತಾಯಿ ಶಿವಮ್ಮಾ ಅವರ ಉದರದಲ್ಲಿ ಅಫ್ಜಲಪೂರ ತಾಲ್ಲೂಕಿನ ಬಿಲ್ಲಾವಾಳ ಗ್ರಾಮದಲ್ಲಿ ೧೯೬೪ ಎಪ್ರಿಲ್ ೨೦ ರಂದು ಜನಿಸಿದರು.

**ಶಿಕ್ಷಣ:**

ಇವರು ಪ್ರಾಥಮಿಕ ಶಿಕ್ಷಣವನ್ನು ಸ್ವ ಗ್ರಾಮದಲ್ಲಿ ಪಡೆದು ನಂತರ ಮಾಧ್ಯಮಿಕ ಶಿಕ್ಷಣ ಅಫ್ಜಲಪೂರದಲ್ಲಿ ಪಡೆದುಕೊಂಡರು. ನಂತರ ಇಂಟರ್ ಮಿಡಿಯಟ್ ಶಿಕ್ಷಣವು ಮಿಲಿಂದ್ ಪದವಿ ಪೂರ್ವ ಕಾಲೇಜಿನಲ್ಲಿ ಮುಗಿಸಿ ನಂತರ ಡಾ|| ಬಿ.ಆರ್. ಅಂಬೇಡ್ಕರ ಪದವಿ ಮಹಾ ವಿದ್ಯಾಲಯದಲ್ಲಿ ತಮ್ಮ ಪದವಿಯನ್ನು ಮುಗಿಸಿದ್ದರು.

**ಉನ್ನತ ಶಿಕ್ಷಣ:**

ಇವರು ಪದವಿ ಮುಗಿಸಿದ ನಂತರ ಗುಲಬರ್ಗಾ ವಿಶ್ವವಿದ್ಯಾಲಯದಿಂದ ೧೯೯೦ರಲ್ಲಿ ಎಂ.ಎ ಪದವಿ ಮುಗಿಸಿ ನಂತರ ಅದೇ ವಿಶ್ವವಿದ್ಯಾಲಯದಿಂದ ೧೯೯೧ರಲ್ಲಿ ಎಂ.ಫಿಲ್. ಪದವಿಯನ್ನು ಪಡೆದುಕೊಂಡರು. ನಂತರ ಇವರು ಸರ್ಕಾರಿ ಸೇವೆಯಲ್ಲಿ ಸೇರಿಕೊಂಡು ಮರಾಠವಾಡ ಸ್ವಾಮಿ ರಮಾನಂದ ತೀರ್ಥ ವಿಶ್ವವಿದ್ಯಾಲಯದಿಂದ ೨೦೦೪ರಲ್ಲಿ ಪಿ.ಹೆಚ್.ಡಿ. ಪದವಿಯನ್ನು ಪೂರೈಸಿದ್ದರು.

**ಸರ್ಕಾರಿ ಸೇವೆ:**

ಡಾ॥ ಸರ್ವೋದಯ ಶಿವಮುತ್ರರವರು ೧೯೯೨ರಲ್ಲಿ ಕರ್ನಾಟಕ ಲೋಕ ಸೇವಾ ಆಯೋಗದಿಂದ ಇತಿಹಾಸ ಉಪನ್ಯಾಸಕರಾಗಿ ಆಯ್ಕೆಯಾದರು. ಇವರು ಮೊದಲು ಯಾದಗೀರಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಉಪನ್ಯಾಸಕರಾಗಿ ೧೦ ವರ್ಷ ಸೇವೆ ಸಲ್ಲಿಸಿದ್ದರು. ನಂತರ ಗುರ್‌ಮಠಕಲ್ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಸೇವೆ ಸಲ್ಲಿಸಿ, ಆ ಮೇಲೆ ಬೀದರಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜನಲ್ಲಿ ಸ್ನಾತಕೋತರ ಇತಿಹಾಸ ವಿಭಾಗದ ಮುಖ್ಯಸ್ಥರಾಗಿ ೨ ವರ್ಷ ಸೇವೆ ಸಲ್ಲಿಸಿದ್ದರು.

**ಕೌಟುಂಬಿಕ ಜೀವನ:**

ಇವರ ಕುಟುಂಬವು ಅತೀ ಸರಳತೆಯಿಂದ ಕೂಡಿದ್ದು, ಇಬ್ಬರು ದಂಪತಿಗಳು, ಒಂದು ಗಂಡು ಮಗು ಹಾಗೂ ಇನ್ನೊಂದು ಹೆಣ್ಣು ಮಗು ಇವರ ಕುಟುಂಬದಲ್ಲಿ. ಇವರ ಸಂಸಾರವು ಚಿಕ್ಕದಾಗಿದ್ದು, ಸರಳ ಮತ್ತು ನೆಮ್ಮದಿಯಿಂದ ಜೀವನ ಕೂಡಿದೆ.

**ಕೃತಿಗಳು:**

- ಕರ್ನಾಟಕದ ಹರಿಕಾರ ರಂಗನಾಥ ರಾಮಚಂದ್ರ ದಿವಾಕರ.
- ಆಧುನಿಕ ಭಾರತದ ಇತಿಹಾಸ (ಬಿ.ಎ. ೫ನೇ ಸೆಮಿಸ್ಟರ್ ವಿದ್ಯಾರ್ಥಿಗಳಿಗಾಗಿ).
- ಆಧುನಿಕ ಭಾರತದ ಇತಿಹಾಸ (ಬಿ.ಎ. ೬ನೇ ಸೆಮಿಸ್ಟರ್ ವಿದ್ಯಾರ್ಥಿಗಳಿಗಾಗಿ).

**ಐತಿಹಾಸಿಕ ಸಾಧನೆ:-**

ಇವರು ಹಿಮೋಜಮ್ ಜನರಲ್ ಅಂತರಾಷ್ಟ್ರೀಯ ಲೇಖನಗಳನ್ನು ಪ್ರಕಟ ಮಾಡಿದ್ದರು. ಜೊತೆಗೆ ಇತಿಹಾಸಕ್ಕೆ ಸಂಬಂಧಿಸಿದಂತೆ ೩ ಕೃತಿಗಳನ್ನು ರಚಿಸಿದ್ದಾರೆ.

**ಕರ್ನಾಟಕ ಚರಿತ್ರೆಗೆ ಡಾ॥ ಸರ್ವೋದಯ ಶಿವಮುತ್ರರ ಕೊಡುಗೆ:**

ಡಾ॥ ಸರ್ವೋದಯ ಶಿವಮುತ್ರ ರವರ ಪ್ರಕಾರ ಕರ್ನಾಟಕದಲ್ಲಿರುವ ಎಲ್ಲಾ ಐತಿಹಾಸಿಕ ತಾಣಗಳಿಗೆ ಭೇಟಿ ನೀಡಿರುವುದು ಹಾಗೂ ಕರ್ನಾಟಕದ ಹರಿಕಾರ ರಂಗನಾಥ ರಾಮಚಂದ್ರ ದಿವಾಕರರ ಜೀವನ ಚರಿತ್ರೆಯನ್ನು ರಚಿಸಿರುವುದು.

**ಸಮಾಜಿಕ ಸೇವೆ:**

ಮೊಟ್ಟ ಮೊದಲು ವಿದ್ಯಾರ್ಥಿ ಸಮುದಾಯಕ್ಕೆ ಸೇವೆ ಸಲ್ಲಿಸಿ ನಂತರ "ಬಸವ ಕೇಂದ್ರದ ಅಜೀವ" ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಹಾಗೂ "ಕನ್ನಡ ಸಾಹಿತ್ಯ ಪರಿಷತ್ತಿನ" ಅಜೀವ ಸದಸ್ಯರಾಗಿ ಸೇವೆ ಸಲ್ಲಿಸಿ ಆ ಮೇಲೆ ಭಾರತೀಯ ದಲಿತ ಸಾಹಿತ್ಯ ಅಕಾಡೇಮಿಯ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿರುತ್ತಾರೆ. ಹೀಗೆ ಅವರು ಸಮಾಜಕ್ಕೆ ಸಲ್ಲಿಸಿದ ಸೇವೆ ಅತ್ಯಂತ ಮಹತ್ವಪೂರ್ಣದ್ದಾಗಿದೆ.

**ಐತಿಹಾಸಿಕ ಸ್ಥಳಗಳಿಗೆ ಭೇಟಿ:**

ಡಾ॥ ಸರ್ವೋದಯ ಶಿವಪುತ್ರರವರು ತಮ್ಮ ಜೀವನದಲ್ಲಿ ಹಲವಾರು ಐತಿಹಾಸಿಕ ಸ್ಥಳಗಳಿಗೆ ಭೇಟಿ ನೀಡಿರುತ್ತಾರೆ. ಅಂದರೆ ಹಂಪಿ, ಬೆಲೂರು ಹಳೆಬೀಡು, ಬಾದಾಮಿ, ಬನಶಂಕರಿ, ಬಿಜಾಪೂರ, ಶ್ರವಣ ಬೆಳಗೊಳ, ಬೀದರ, ಬಸವಕಲ್ಯಾಣ, ಗುಲಬರ್ಗಾ, ಉತ್ತರ ಪ್ರದೇಶ, ದೆಹಲಿ, ಫತ್ತೆಪುರ ಸಿಕ್ರಿ, ಆಗ್ರಾ, ಜೈಪೂರ ಇತ್ಯಾದಿ ಐತಿಹಾಸಿಕ ಸ್ಥಳಗಳಿಗೆ ಭೇಟಿ ನೀಡಿ ಅಪಾರ ಅನುಭವ ಪಡೆದುಕೊಂಡಿರುತ್ತಾರೆ.

**ಪ್ರಶಸ್ತಿಗಳು:**

ಡಾ॥ ಸರ್ವೋದಯ ಶಿವಪುತ್ರರವರು ಇತಿಹಾಸ ಕ್ಷೇತ್ರದಲ್ಲಿ ಒಬ್ಬ ಉತ್ತಮ ಉಪನ್ಯಾಸಕರಾಗಿ ಹಲವಾರು ಪ್ರಶಸ್ತಿಗಳನ್ನು ಪಡೆದುಕೊಂಡಿರುತ್ತಾರೆ.

೧. ಡಾ॥ ಬಿ.ಆರ್. ಅಂಬೇಡ್ಕರ ಫೀಲಾಶಿಪ್ ಪ್ರಶಸ್ತಿ ನವ ದೆಹಲಿ.

೨. ಶಿಕ್ಷಕ ರತ್ನ ಪ್ರಶಸ್ತಿ.

೩. ಬಸವಶ್ರೀ ಪ್ರಶಸ್ತಿ.

**ಐತಿಹಾಸಿಕ ಸಂಪನ್ಮೂಲಗಳ ಸಂಗ್ರಹಣೆ:**

- ಇವರು ಇತಿಹಾಸಕ್ಕೆ ಸಂಬಂಧಿಸಿದಂತೆ ನಾಣ್ಯಗಳ ಸಂಗ್ರಹಣೆ. ಈ ನಾಣ್ಯಗಳು ಮೂರು ಯುಗದ ಇತಿಹಾಸಕ್ಕೆ ಸಂಬಂಧಿಸಿದವುಗಳಾಗಿವೆ.
- ಸಿಂಧೂ ನಾಗರಿಕತೆಗೆ ಸಂಬಂಧಿಸಿದಂತೆ ಪಂಜಾಬದಲ್ಲಿ ಸುಟ್ಟ ಇಟಿಗೆ ಸಂಗ್ರಹಣೆ.
- ಯೂರೋಪಿನ ಇತಿಹಾಸಕ್ಕೆ ಸಂಬಂಧಿಸಿದಂತೆ, ಪ್ರಮುಖ ವ್ಯಕ್ತಿಗಳ ಭಾವಚಿತ್ರ ಸಂಗ್ರಹಣೆ. ಉದಾಃ ಮ್ಯಾಜಿನಿ, ೩ನೇ ನೆಪೋಲಿಯನ್, ಅಲೆಕ್ಸಾಂಡರ್ ಮತ್ತು ಗ್ಯಾರಿಬಲ್ಡ್ ಇತ್ಯಾದಿ.

**ಇತಿಹಾಸ ಉಪನ್ಯಾಸಕರ ಸೇವೆಗೆ ಪ್ರೇರಣೆ:**

ನಾನು ಇತಿಹಾಸ ಉಪನ್ಯಾಸಕರಾಗಬೇಕಾದರೆ ಇತಿಹಾಸ ವಿಭಾಗದಲ್ಲಿ ಪರಿಣತಿ ಪಡೆದ ಪ್ರಾಧ್ಯಾಪಕರ ಪ್ರಭಾವದಿಂದ ನಾನು ಉಪನ್ಯಾಸಕನಾಗಿದ್ದೇನೆ. ಅವರುಗಳೆಂದರೆ, ಎಸ್.ಜಿ. ಘಟಪಣಜಿ, ಕೆ. ಅನ್ನಧಾನಯ್ಯಾ, ಪ್ರೊ॥ ಝಾಕಿಯಾ ಅನ್ಸರಿ, ಡಾ॥ ಮಂಜುಳಾ ಬಿ. ಚಿಂಚೋಳಿ.

**ಐತಿಹಾಸಿಕ ಕಲೆ ವಾಸ್ತು ಶಿಲ್ಪ ಮತ್ತು ಸಂಸ್ಕೃತಿಗಳು ಕಣ್ಮರೆಯಾಗುತ್ತಿರುವುದಕ್ಕೆ ಡಾ॥ ಸರ್ವೋದಯ ಶಿವಪುತ್ರರವರ ಅಭಿಪ್ರಾಯ:**

ನಮ್ಮ ಪ್ರಾಚೀನ ಕಾಲದ ಅವಶೇಷಗಳು ಉಳಿಸಿಕೊಳ್ಳಬೇಕಾದರೆ, ಅದಕ್ಕೆ ನಾವೆಲ್ಲರು ತಿಳಿದುಕೊಂಡು ಅವುಗಳನ್ನು ರಕ್ಷಣೆ ಮಾಡಬೇಕು. ಇದಕ್ಕೆ ಸಂಬಂಧಿಸಿದಂತೆ ಪ್ರಾಕ್ತನ ಇಲಾಖೆಯವರು ಇದಕ್ಕೆ ಹೆಚ್ಚು ಜವಬ್ದಾರಿಯನ್ನು

ವಹಿಸಿಕೊಂಡು ನಮ್ಮ ಪ್ರಾಚೀನ ಕಾಲದ ಅವಶೇಷಗಳು ರಕ್ಷಣೆ ಮಾಡಬೇಕು. ಇಲ್ಲದಿದ್ದರೆ ಮುಂದಿನ ಜನಾಂಗಕ್ಕೆ ಈ ಸ್ಮಾರಕಗಳ ಬಗ್ಗೆ ಹೇಳಲು ಅವಶೇಷಗಳು ಇರುವುದಿಲ್ಲವೆಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**ಹವ್ಯಾಸಗಳು:**

ಇವರು ಸರಳ ಸ್ವಭಾವವುಳ್ಳ ಒಬ್ಬ ಇತಿಹಾಸಕಾರರಾಗಿ ತಮ್ಮ ಜೀವನದಲ್ಲಿ ಹಲವಾರು ಹವ್ಯಾಸಗಳನ್ನು ಅಳವಡಿಸಿಕೊಂಡಿರುತ್ತಾರೆ. ಅವುಗಳೆಂದರೆ ಓದುವುದು, ಬರೆಯುವುದು, ಓದಿಸುವುದು, ವಾರ್ತಾ ಪತ್ರಿಕೆ ಓದುವುದು, ಮತ್ತು ಕ್ರಿಕೆಟ್ ನೋಡುವುದು.

**ಜೀವನದ ಅತಿ ಸಂತೋಷದ ಸಂದರ್ಭ:**

ಎಲ್ಲಕಿಂತ ದೊಡ್ಡವರು ಮಕ್ಕಳು. ನಾನು ಅವರ ಮಧ್ಯ ಕಾಲ ಕಳೆಯುತ್ತಿರುವಾಗ ಮತ್ತು ಇನ್ನೊಂದು ಸಲ ಎಂದರೆ ನನಗೆ ಸರ್ಕಾರಿ ನೌಕರಿ ಸಿಕ್ಕಿದಾಗ ಸಂತೋಷವಾಗಿ ಎಂದು ವ್ಯಕ್ತಪಡಿಸಿದ್ದಾರೆ.

**ಪ್ರಸ್ತುತ ಸೇವೆ:**

ಇವರು ಬೀದರ ಸರ್ಕಾರಿ ಪ್ರಥಮ ದರ್ಜೆ ಕಾಲೇಜ್‌ನ ಸ್ನಾತಕೋತ್ತರ ಇತಿಹಾಸ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸುತ್ತಿರುವಾಗಲೆ ತಮ್ಮ ಕೋರಿಕೆಯ ಮೇರೆಗೆ ವರ್ಗಾವಣೆಗೊಂಡು ಪ್ರಸ್ತುತ ಗುಲಬರ್ಗಾದ ಸರ್ಕಾರಿ ಮಹಾವಿದ್ಯಾಲಯದಲ್ಲಿ ಸ್ನಾತಕೋತರ ಇತಿಹಾಸ ವಿಭಾಗದ ಮುಖ್ಯಸ್ಥರಾಗಿ ಸೇವೆಯನ್ನು ಸಲ್ಲಿಸುತಿದ್ದಾರೆ.

**ವ್ಯಕ್ತಿತ್ವ:**

ಡಾ॥ ಸರ್ವೋದಯ ಶಿವಪುತ್ರರವರ ವ್ಯಕ್ತಿತ್ವವು ಅತೀ ಸರಳ ಸ್ವಭಾವದಿಂದ ಕೂಡಿರುತ್ತದೆ. ಬಡ ಕುಟುಂಬದಲ್ಲಿ ಜನಿಸಿದ ಇವರು ಪ್ರತಿಯೊಬ್ಬರನ್ನು ಒಳ್ಳೆಯ ಮನಸ್ಸಿನಿಂದ ಕಾಣುತ್ತಾರೆ. ಇವರು ಉನ್ನತ ಹಂತಕ್ಕೆ ಮುಟ್ಟಿ ಇತಿಹಾಸ ಕ್ಷೇತ್ರದಲ್ಲಿ ಹಲವಾರು ಸಾಧನೆಗಳನ್ನು ಮಾಡುವ ಮೂಲಕ ಇತಿಹಾಸಕಾರರಾಗಿ ಹೊರಹೊಮ್ಮಲಿದ್ದಾರೆ. ಇವರು ಕರ್ನಾಟಕ ಚರಿತ್ರೆಗೆ ಸಲ್ಲಿಸಿದ ಸೇವೆ ಎಂದರೆ ಕರ್ನಾಟಕ ಹರಿಕಾರ ರಂಗನಾಥ ರಾಮಚಂದ್ರ ದಿವಾಕರರ ಜೀವನ ಸಾಧನೆ ಕುರಿತು ಗ್ರಂಥವನ್ನು ರಚಿಸಿದ್ದರು. ಇವರು ತಮ್ಮ ಜೀವನದಲ್ಲಿ ಇತಿಹಾಸ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಹೆಚ್ಚಿನ ಗ್ರಂಥಗಳನ್ನು ರಚಿಸಲಿ ಎಂದು ಹಾರೈಸುತ್ತೇನೆ.

* * *

## -: ಅಡಿ ಟಿಪ್ಪಣಿಗಳು :-

| | | |
|---|---|---|
| ೧. | ಸುಮಾಶಂಕರ್ : ಪ್ರಪಂಚದ ಪ್ರಮುಖ ಇತಿಹಾಸಕಾರರು | ಪುಟ ಸಂಖ್ಯೆ ೮೫ |
| ೨. | -ಅದೇ- | ಪುಟ ಸಂಖ್ಯೆ ೮೬ |
| ೩. | -ಅದೇ- | ಪುಟ ಸಂಖ್ಯೆ ೮೬ |
| ೪. | -ಅದೇ- | ಪುಟ ಸಂಖ್ಯೆ ೮೭ |
| ೫. | ಫಾಲಾಕ್ಷ : ಇತಿಹಾಸ ರಚನೆ ಮತ್ತು ಸಂಶೋಧನೆ. | ಪುಟ ಸಂಖ್ಯೆ ೩೭೦ |
| ೬. | ರಾಜಪ್ಪ ದಳವಾಯಿ : ಕನ್ನಡ ಸಾಹಿತ್ಯಕೋಶ, | ಪುಟ ಸಂಖ್ಯೆ ೩೮೮ |
| ೭. | -ಅದೇ- | ಪುಟ ಸಂಖ್ಯೆ ೩೮೮ |
| ೮. | ಸುಮಾಶಂಕರ್ : ಪ್ರಪಂಚದ ಪ್ರಮುಖ ಇತಿಹಾಸಕಾರರು | ಪುಟ ಸಂಖ್ಯೆ ೮೯ |
| ೯. | -ಅದೇ- | ಪುಟ ಸಂಖ್ಯೆ ೯೦ |
| ೧೦. | ರಾಜಪ್ಪ ದಳವಾಯಿ : ಕನ್ನಡ ಸಾಹಿತ್ಯಕೋಶ | ಪುಟ ಸಂಖ್ಯೆ ೩೮೯ |
| ೧೧. | ಫಾಲಾಕ್ಷ : ಇತಿಹಾಸ ರಚನೆ ಮತ್ತು ಸಂಶೋಧನೆ. | ಪುಟ ಸಂಖ್ಯೆ ೩೧೫ |
| ೧೨. | -ಅದೇ- | ಪುಟ ಸಂಖ್ಯೆ ೩೧೬ |
| ೧೩. | -ಅದೇ- | ಪುಟ ಸಂಖ್ಯೆ ೩೧೬ |
| ೧೪. | -ಅದೇ- | ಪುಟ ಸಂಖ್ಯೆ ೩೧೭ |
| ೧೫. | -ಅದೇ- | ಪುಟ ಸಂಖ್ಯೆ ೩೨೧ |
| ೧೬. | ವೆಂಕಟರತ್ನಂ: ಇತಿಹಾಸ ಮತ್ತು ಸಂಶೋಧನಾ ಮಾರ್ಗ ಪದ್ಮಾ ಎಂ.ಬಿ. | ಪುಟ ಸಂಖ್ಯೆ ೫೧೫ |
| ೧೭. | ಸುಮಾಶಂಕರ್ : ಪ್ರಪಂಚದ ಪ್ರಮುಖ ಇತಿಹಾಸಕಾರರು | ಪುಟ ಸಂಖ್ಯೆ ೭೭ |
| ೧೮. | -ಅದೇ- | ಪುಟ ಸಂಖ್ಯೆ ೭೮ |
| ೧೯. | -ಅದೇ- | ಪುಟ ಸಂಖ್ಯೆ ೭೮ |
| ೨೦. | -ಅದೇ- | ಪುಟ ಸಂಖ್ಯೆ ೭೯ |
| ೨೧. | ವೆಂಕಟರತ್ನಂ: ಇತಿಹಾಸ ಮತ್ತು ಸಂಶೋಧನಾ ಮಾರ್ಗ ಪದ್ಮಾ ಎಂ.ಬಿ. | ಪುಟ ಸಂಖ್ಯೆ ೫೧೬ |
| ೨೨. | ಫಾಲಾಕ್ಷ : ಇತಿಹಾಸ ರಚನೆ ಮತ್ತು ಸಂಶೋಧನೆ | ಪುಟ ಸಂಖ್ಯೆ ೩೧೯ |
| ೨೩. | ವೆಂಕಟರತ್ನಂ: ಇತಿಹಾಸ ಮತ್ತು ಸಂಶೋಧನಾ ಮಾರ್ಗ ಪದ್ಮಾ ಎಂ.ಬಿ. | ಪುಟ ಸಂಖ್ಯೆ ೫೧೮ |
| ೨೪. | ಫಾಲಾಕ್ಷ : ಇತಿಹಾಸ ರಚನೆ ಮತ್ತು ಸಂಶೋಧನೆ, | ಪುಟ ಸಂಖ್ಯೆ ೩೨೦ |

| | | |
|---|---|---|
| ೨೫. | ಸರ್ವೋದಯ ಶಿವಪುತ್ರ ಎಸ್.: ಕರ್ನಾಟಕ ಹರಿಕಾರ ಶ್ರೀ ರಂಗನಾಥ ರಾಮಚಂದ್ರ ದಿವಾಕರ್ | ಪುಟ ಸಂಖ್ಯೆ ೩ |
| ೨೬. | -ಅದೇ- | ಪುಟ ಸಂಖ್ಯೆ ೧೧ |
| ೨೭. | -ಅದೇ- | ಪುಟ ಸಂಖ್ಯೆ ೨೫-೨೯ |
| ೨೮. | -ಅದೇ- | ಪುಟ ಸಂಖ್ಯೆ ೩೪ |
| ೨೯. | -ಅದೇ- | ಪುಟ ಸಂಖ್ಯೆ ೫೨ |
| ೩೦. | -ಅದೇ- | ಪುಟ ಸಂಖ್ಯೆ ೬೧ |
| ೩೧. | -ಅದೇ- | ಪುಟ ಸಂಖ್ಯೆ ೭೯ |
| ೩೨. | ಸುಮಾಶಂಕರ್ : ಪ್ರಪಂಚದ ಪ್ರಮುಖ ಇತಿಹಾಸಕಾರರು | ಪುಟ ಸಂಖ್ಯೆ ೯೫ |
| ೩೩. | -ಅದೇ- | ಪುಟ ಸಂಖ್ಯೆ ೯೬ |
| ೩೪. | -ಅದೇ- | ಪುಟ ಸಂಖ್ಯೆ ೯೬ |
| ೩೫. | -ಅದೇ- | ಪುಟ ಸಂಖ್ಯೆ ೯೧ |
| ೩೬. | ಧನವಂತ ಹಾಜವಗೋಳ : ಶೋಧ ಪ್ರತಿಶೋಧ | ಪುಟ ಸಂಖ್ಯೆ ೬೮-೬೯ |
| ೩೭. | ಸುಮಾಶಂಕರ್ : ಪ್ರಪಂಚದ ಪ್ರಮುಖ ಇತಿಹಾಸಕಾರರು | ಪುಟ ಸಂಖ್ಯೆ ೯೧ |
| ೩೮. | -ಅದೇ- | ಪುಟ ಸಂಖ್ಯೆ ೯೨ |
| ೩೯. | -ಅದೇ- | ಪುಟ ಸಂಖ್ಯೆ ೯೩ |
| ೪೦. | ಫಾಲಾಕ್ಷ : ಇತಿಹಾಸ ರಚನೆ ಮತ್ತು ಸಂಶೋಧನೆ, | ಪುಟ ಸಂಖ್ಯೆ ೩೨೩ |
| ೪೧. | ಸುಮಾಶಂಕರ್ : ಪ್ರಪಂಚದ ಪ್ರಮುಖ ಇತಿಹಾಸಕಾರರು | ಪುಟ ಸಂಖ್ಯೆ ೯೩ |
| ೪೨. | ಅಂತರಜಾಲ ಮಾಹಿತಿ ಸಂಗ್ರಹ | - |
| ೪೩. | ವೆಂಕಟರತ್ನಂ: ಇತಿಹಾಸ ಮತ್ತು ಸಂಶೋಧನಾ ಮಾರ್ಗ ಪದ್ಮಾ ಎಂ.ಬಿ. | ಪುಟ ಸಂಖ್ಯೆ ೫೨೭ |
| ೪೪. | -ಅದೇ- | ಪುಟ ಸಂಖ್ಯೆ ೫೨೮ |
| ೪೫. | -ಅದೇ- | ಪುಟ ಸಂಖ್ಯೆ ೫೨೯ |
| ೪೬ | -ಅದೇ- | ಪುಟ ಸಂಖ್ಯೆ ೫೩೦ |
| ೪೭. | ಸುಮಾಶಂಕರ್ : ಪ್ರಪಂಚದ ಪ್ರಮುಖ ಇತಿಹಾಸಕಾರರು | ಪುಟ ಸಂಖ್ಯೆ ೮೧ |
| ೪೮. | ಫಾಲಾಕ್ಷ : ಇತಿಹಾಸ ರಚನೆ ಮತ್ತು ಸಂಶೋಧನೆ, | ಪುಟ ಸಂಖ್ಯೆ ೩೨೪ |
| ೪೯. | ಸುಮಾಶಂಕರ್ : ಪ್ರಪಂಚದ ಪ್ರಮುಖ ಇತಿಹಾಸಕಾರರು | ಪುಟ ಸಂಖ್ಯೆ ೮೨ |
| ೫೦. | -ಅದೇ- | ಪುಟ ಸಂಖ್ಯೆ ೮೩ |
| ೫೧. | -ಅದೇ- | ಪುಟ ಸಂಖ್ಯೆ ೮೪ |
| ೫೨. | ಅಂತರಜಾಲ ಮಾಹಿತಿ ಸಂಗ್ರಹ. | - |

ಅಧ್ಯಾಯ-೫

# ಕರ್ನಾಟಕ ಇತಿಹಾಸಕಾರರ ಗುರಿ ಮತ್ತು ಮೌಲ್ಯಗಳು

ಅಧ್ಯಾಯ-೫

# ಕರ್ನಾಟಕ ಇತಿಹಾಸಕಾರರ ಗುರಿ ಮತ್ತು ಮೌಲ್ಯಗಳು

ಗುರಿ ಇಲ್ಲದೆ ಯಾವುದೆ ಕಾರ್ಯ ಸರಿಯಾಗಿ ನೆರವೇರುವುದಿಲ್ಲ. ಇತಿಹಾಸ ರಚನೆಯಲ್ಲಿ ಕೂಡ ಗುರಿ ಮತ್ತು ಮೌಲ್ಯಗಳು ಅತ್ಯಂತ ಮುಖ್ಯವಾದವು ಆಗಿವೆ. ಅನೇಕ ಪ್ರಮುಖ ಇತಿಹಾಸಕಾರರು ಇತಿಹಾಸ ರಚನೆಗೆ ಬೇಕಾಗುವ ಗುರಿ ಮತ್ತು ಮೌಲ್ಯಗಳ ಬಗ್ಗೆ ಈ ಕೆಳಗಿನಂತೆ ವಿವರಿಸಿದ್ದಾರೆ.

"ಮಾನವೀಯತೆಯೇ ಇತಿಹಾಸದ ಗುರಿಯಾಗಿದೆ" ಎಂದು ಹೇಗಲ್ ಹೇಳಿದ್ದಾರೆ. ಸರ್ ವಾಲ್ಟರ್ ಪ್ರಕಾರ ಇತಿಹಾಸದ ಗುರಿ ಜೀವನದಲ್ಲಿ ಸೌಹಾರ್ದತೆ, ಸಹಕಾರ ಹಾಗೂ ಸಮೃದ್ಧಿ ತರುವುದಂಥದ್ದು ಆಗಬೇಕು.

ಕರ್ನಾಟಕ ಇತಿಹಾಸಕಾರರ ಗುರಿ ಹಾಗೂ ಮೌಲ್ಯಗಳು ಕೂಡ ಮೇಲೆ ಹೇಳಿದ ವಿಷಯಕ್ಕೆ ವಿರುದ್ಧ ಹಾಗೇನಿಲ್ಲ. ಇತಿಹಾಸ ರಚನೆ ಮಾಡುವುದು ಅಷ್ಟೇನೂ ಸುಲಭದ ಕೆಲಸವಲ್ಲ. ಅದು ಅನೇಕರಿಗೆ ಬೇಸರ ತರುತ್ತದೆ. ವೈರತ್ವವನ್ನು ಕೂಡ ಮೂಡಿಸುತ್ತದೆ. ಅಂದಮಾತ್ರಕ್ಕೆ ಸತ್ಯವನ್ನು ಮರೆಮಾಚಲಾಗುವುದಿಲ್ಲ. ಆರ್.ಸಿ. ಮುಜುಮ್ದಾರರು ಹೇಳಿದಂತೆ ಗತಕಾಲದ ಸ್ಯತವನ್ನು ಹೇಳುವುದು ಇತಿಹಾಸಕಾರರ ಗುರಿಯಾಗಿರಬೇಕು. ಇತಿಹಾಸದಲ್ಲಿ ಭಿನ್ನಾಭಿಪ್ರಾಯಗಳು ಸಹಜ.

ಕರ್ನಾಟಕ ಇತಿಹಾಸ ರಚನಾಕಾರರು ಸತ್ಯಸಂಗತಿಗಳನ್ನು ಮರೆಮಾಚದೆ ಸತ್ಯವನ್ನೆ ಬರೆಯವ ಗುರಿಯನ್ನು ಹೊಂದಿದ್ದಾರೆ. 'ರ್ನಾಟಕದ ಅರಸರು ಯುದ್ಧದಲ್ಲಿ ಸೋತಾಗ ಧೈರ್ಯವಾಗಿ ಸೋಲನ್ನೊಪ್ಪಿಕೊಂಡು ಸೋತಿದ್ದಾರೆ' ಎಂದು ಬರೆದಿದ್ದಾರೆ. ಉದಾ:-ಎರಡನೆಯ ಪುಲಕೇಶಿ, ನರಸಿಂಹವರ್ಮ ಪಲ್ಲವನೊಡನೆ ಯುದ್ಧ ಮಾಡಿ ಸೋತಾಗ, ಪುಲಿಕೇಶಿಯು ಸೋಲನ್ನು ಒಪ್ಪಿಕೊಂಡಿದ್ದನ್ನು ಸತ್ಯವೇ ಬರೆದಿದ್ದಾರೆ.

ಕರ್ನಾಟಕ ವಿವಿಧತೆಯಲ್ಲಿ ಏಕತೆಯನ್ನು ಹೊಂದಿದೆ. ಇಲ್ಲಿ ಅನೇಕ ಜಾತಿ, ಮತ, ಧರ್ಮ ಹಾಗೂ ಭಾಷೆಗಳಿವೆ. ಇವರೆಲ್ಲರೂ ಕೂಡಿ ಕರ್ನಾಟಕದಲ್ಲಿ ಬಾಳಿದ್ದಾರೆ ಎಂದು ವಿಜಯನಗರ ಇತಿಹಾಸವನ್ನು ರಚಿಸಿದ ಇತಿಹಾಸಕಾರರು ಇದಕ್ಕೆ ಸಾಕ್ಷಿಯಾಗಿದ್ದಾರೆ.

ಕರ್ನಾಟಕ ಇತಿಹಾಸ ರಚನಾಕಾರರು ಶೈವ, ವೈಷ್ಣವ, ಜೈನ, ಬೌದ್ಧ, ಕ್ರೈಸ್ತ ಹಾಗೂ ಇಸ್ಲಾಂ ಧರ್ಮಗಳನ್ನು ಗೌರವಿಸಿ ಪ್ರತಿ ಧರ್ಮದಲ್ಲಿರುವ ತಿರುಳನ್ನು ಪ್ರಶಂಸಿಸಿದ್ದಾರೆ ಹಾಗೂ ಧಾರ್ಮಿಕ ಶಾಂತಿಯನ್ನು ಮೂಡಿಸಿದ್ದಾರೆ.

ಕರ್ನಾಟಕ ಇತಿಹಾಸ ರಚನಾಕಾರರು ಅರಸರ ಸಾಧನೆಗಳನ್ನು ಮಾತ್ರ ಹೊಗಳುವ ಗುರಿಯನ್ನಿಟ್ಟುಕೊಂಡಿರಲಿಲ್ಲ. ಅವರು ಮಾಡಿದ ತಪ್ಪುಗಳನ್ನು ಕೂಡ ನಿರ್ಭಯವಾಗಿ ಟೀಕಿಸಿದ್ದಾರೆ.

ಆರಂಭದ ಇತಿಹಾಸಕಾರರು ರಾಜಕೀಯ ಹಾಗೂ ಆಡಳಿತಕ್ಕೆ ಹೆಚ್ಚು ಒತ್ತು ನೀಡಿದ್ದಾರೆ. ಇನ್ನೂ ಕೆಲವು ರಚನಾಕಾರರು ಧರ್ಮ, ಸಂಸ್ಕೃತಿ ಹಾಗೂ ಕಲೆಯ ವಿಷಯಗಳನ್ನು ಕುರಿತು ಬರೆಯುವ ಗುರಿಯನ್ನಿಟ್ಟುಕೊಂಡಿದ್ದರು.

ಕೆಲವೊಮ್ಮೆ ಕೆಲವು ವಿಷಯಗಳ ಬಗ್ಗೆ ಭಿನ್ನಾಭಿಪ್ರಾಯಗಳು ಮೂಡಿದಾಗ ಅವುಗಳನ್ನು ಅರ್ಥೈಸಿಕೊಂಡು ಒಂದು ಒಮ್ಮತಕ್ಕೆ ಬಂದಿದ್ದಾರೆ. ಕರ್ನಾಟಕ ಇತಿಹಾಸ ರಚನಾಕಾರರು ತಮ್ಮ ಬರಹಗಳಿಂದ ಸಮಾಜದಲ್ಲಿ ಯಾವುದೇ ಕಲಹಗಳು ಏಳಲಾರದ ಹಾಗೆ ಜಾಗರೂಕತೆಯಿಂದ ತಮ್ಮ ಗುರಿಗಳನ್ನು ತಲುಪಿದ್ದಾರೆ.

**ಕರ್ನಾಟಕ ಇತಿಹಾಸಕಾರರ ಮೌಲ್ಯಗಳು :**

ಇತಿಹಾಸ ರಚನಾಕಾರರು ಹಾಗೂ ಇತಿಹಾಸ ಬೋಧಕರು ಒಳ್ಳೆಯ ಮೌಲ್ಯಗಳನ್ನು ಹೊಂದಿರಬೇಕು. ಇಲ್ಲವಾದರೆ ಅನೇಕ ದುರಂತಗಳಾಗುತ್ತವೆ. ಅನೇಕ ಜಾತಿಗಳ ನಡುವೆ ವಿವಿಧ ಭಾಷೆ ಮಾತನಾಡುವುದರ ನಡುವೆ ದ್ವೇಷಗಳು ಬೆಳೆದು ಸಂಘರ್ಷಗಳಿಗೆ ಕಾರಣವಾಗುತ್ತದೆ. ಕರ್ನಾಟಕ ಇತಿಹಾಸ ರಚನೆಯಲ್ಲಿ ಅಪಮೌಲ್ಯಗಳು ಕಂಡುಬರುವುದಿಲ್ಲ. ಕರ್ನಾಟಕ ಇತಿಹಾಸ ತಜ್ಞರು ರಾಷ್ಟ್ರಪ್ರೇಮ, ನಾಗರೀಕ ಪ್ರಜ್ಞೆ, ಧರ್ಮ ಸಹಿಷ್ಣುತೆ ಹಾಗೂ ಸಹ ಬಾಳ್ವಿಕೆ ಅಂತಹ ಉತ್ತಮೋತ್ತಮ ಮೌಲ್ಯಗಳನ್ನು ಹೊಂದಿದ್ದಾರೆ. ಪ್ರಾಂತೀಯ ಭೇದ, ಭಾಷೆ ಭೇದ ಮೂಡಿಸದೆ ಕನ್ನಡಿಗರೆಲ್ಲರೂ ಭಾರತೀಯರೆಂಬ ಮೌಲ್ಯವನ್ನು ನಿರೂಪಿಸಿದ್ದಾರೆ. "ಡಾ॥ ಬಿ.ಆರ್. ಅಂಬೇಡ್ಕರ್ ರವರು ಇತಿಹಾಸ ಮರೆತವರು ಇತಿಹಾಸವನ್ನು ಸೃಷ್ಟಿಸಲಾರರು" ಎಂದಿದ್ದಾರೆ.

ಇತಿಹಾಸ ರಚನೆ, ಇತಿಹಾಸ ಅಧ್ಯಯನ ಮಾನವನಿಗೆ ಅತಿ ಅವಶ್ಯಕವಾಗಿದೆ. ಇದರಿಂದ ನಾಗರೀಕನಾಗುತ್ತಾನೆ. ಹಾಗೂ ಸುಸಂಕೃತನಾಗುತ್ತಾನೆ. ಇಂದಿನ ಸಮಾಜ ಅಂತರರಾಷ್ಟ್ರೀಯ ಸಮಾಜ. ದೇಶ ದೇಶಗಳ ನಡುವೆ, ಮನುಷ್ಯರ ನಡುವೆ ಒಳ್ಳೆಯ ಸಂಬಂಧ, ಅನುಬಂಧ ಬೆಳೆಯಬೇಕಾದರೆ ವಿವಿಧ ದೇಶಗಳ ಇತಿಹಾಸ ರಚನೆ ಹಾಗೂ ಅಧ್ಯಯನ ಅತೀ ಅವಶ್ಯಕವಾಗಿದೆ.

* * *

ಅಧ್ಯಾಯ-೬

# ಸಮಾರೋಪ

ನಮ್ಮ ಕರ್ನಾಟಕ ಇತಿಹಾಸ ಬಹಳ ವಿಶಾಲವಾಗಿದೆ. ಈ ನಾಡು ಭಾರತದ ಇತಿಹಾಸದಲ್ಲೇ ಮಾಡಿದ ಸಾಧನೆ ಅಪೂರ್ವವಾಗಿದೆ. ಹಾಗಾಗಿ ಇಂತಹ ನಾಡಿನ ಬಗ್ಗೆ ತಿಳಿದುಕೊಳ್ಳವುದು ಬಹಳ ಪ್ರಮುಖವಾಗಿದೆ.

ಕರ್ನಾಟಕ ಚರಿತ್ರೆಯ ಪ್ರಮುಖ ಇತಿಹಾಸ ತಜ್ಞರ ವಿಷಯಗಳನ್ನು ತೆಗೆದು ಕೊಂಡು ಅದಕ್ಕೆ ತಕ್ಕಂತೆ ಲಿಖಿತ ದಾಖಲೆಗಳನ್ನು ಬಳಸಿಕೊಂಡು ಅವರ ಚರಿತ್ರೆ ಹಾಗೂ ಸಾಧನೆಗಳನ್ನು ಬೆಳಕಿಗೆ ತರುವುದು ಈ ಪ್ರಬಂಧದ ಪ್ರಯತ್ನವಾಗಿದೆ.

ಪ್ರಸ್ತುತ ಈ ಅಧ್ಯಯನ ವಿವಿಧ ಅಧ್ಯಯಗಳಲ್ಲಿ ಚರ್ಚೆಗೆ ತೆಗೆದುಕೊಂಡಿರುವ ವಿಷಯಗಳನ್ನು ಒರೆ ಹಚ್ಚಿ ನೋಡಲಾಗಿದೆ. ಈ ಸಂದರ್ಭದಲ್ಲಿ ಅನೇಕ ಬಾರಿ ಲಿಖಿತ ಆಕರಗಳು ಮತ್ತು ಸಂದರ್ಶನಗಳು ನೀಡಿರುವ ದೃಷ್ಠಿ ಕೋನಗಳು ಭಿನ್ನವಾಗಿರುವುದನ್ನು ನೋಡಿದ್ದೇವೆ. ಇನ್ನೂ ಕೆಲವು ಸಂದರ್ಭದಲ್ಲಿ ಒಂದು ವಸ್ತು ವಿಷಯವನ್ನು ಭಿನ್ನ ಭಿನ್ನ ಸಂದರ್ಶನದ ಆಕರಗಳು, ಬೇರೆ ಬೇರೆ ರೀತಿಯಲ್ಲಿ ವಿಶ್ಲೇಷಿಸಿರುವುದನ್ನು ನಾವು ನೋಡಬಹುದು.

ಕೆಲವು ಸಂದರ್ಭದಲ್ಲಿ ಲಿಖಿತ ಆಧಾರಗಳು ಮತ್ತು ಸಂದರ್ಶನ ಆಧಾರಗಳು ಪರಸ್ಪರ ಪೂರಕವಾಗಿರುವುದನ್ನು ಈ ಅಧ್ಯಯನದುದ್ದಕ್ಕೂ ಗಮನಿಸಬಹುದು.

**ಪ್ರಬಂಧದ ಯೋಜನೆ :-**

ಪ್ರಸ್ತುತ ಈ ಪ್ರಬಂಧವು ವಿವಿಧ ಅಧ್ಯಯಗಳಾಗಿ ವಿಂಗಡಿಸಿ ಮೊದಲನೇ ಅಧ್ಯಾಯದಲ್ಲಿ ಪ್ರಮುಖತೆ, ವ್ಯಾಪ್ತಿ, ಇತಿಮಿತಿಗಳು, ಪ್ರಬಂಧದ ನಿಯೋಜನೆ ಇವುಗಳನ್ನು ತಿಳಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಕರ್ನಾಟಕದ ಐತಿಹಾಸದ ಹಿನ್ನಲೆ ನಮ್ಮ ನಾಡು ಹಿಂದಿನಿಂದ ಇಂದಿನವರೆಗೆ ಹೇಗೆ ಇತ್ತು. ಅಂದರೆ ಮೌರ್ಯರಿಂದ ಮೈಸೂರು ಒಡೆಯರ ಹಾಗೂ ಏಕೀಕರಣದ ಬಗ್ಗೆ ಈ ಪ್ರಬಂಧಗಳಲ್ಲಿ ವಿಶ್ಲೇಷಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಇತಿಹಾಸ ರಚನಾಕಾರರ ಕಲೆಯ ಹಿನ್ನಲೆ ಕೂಡ ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ವಿಷಯದ ಕೇಂದ್ರ ಬಿಂದು ಆದ "ಕರ್ನಾಟಕ ಚರಿತ್ರೆಯ ಪ್ರಮುಖ ಇತಿಹಾಸ ತಜ್ಞರು" ಇವರ ಜೀವನ ಚರಿತ್ರೆ, ಸಾಧನೆ ಮತ್ತು ಸೇವೆ ಅನೇಕ ಇತಿಹಾಸಕಾರರವರೆಗೆ ಈ ಪ್ರಬಂಧದಲ್ಲಿ ಮಂಡಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಇತಿಹಾಸಕಾರರ ಗುರಿ, ಮೌಲ್ಯಗಳು ಅವರ ಸಂಶೋಧನಾ ಶೈಲಿ. ಇವೆಲ್ಲವು ಕೂಡ ತಿಳಿಸಲು ಈ ಪ್ರಬಂಧದಲ್ಲಿ ಪ್ರಯ್ನತಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ವಿವರಿಸಿದ ತಾರ್ಕಿಕ ಅಂಶಗಳನ್ನು ಗಮನ ದಲ್ಲಿಟ್ಟುಕೊಂಡು ಪ್ರಬಂಧದ ಕೊನೆಯ ಅಂಶ ಮಂಡಿಸಲಾಗಿದೆ.

ಖ್ಯಾತ ಇತಿಹಾಸ ತಜ್ಞರಾದ ಫಾಲಾಕ್ಷರವರು ಬರೆದ ಮಸ್ತಕದಲ್ಲಿ ದೊರೆಯದ ಅನೇಕ ಮಾಹಿತಿಗಳು ದೊರೆತವು. ಇವೆಲ್ಲಾ ಮಾಹಿತಿಗಳನ್ನು ಆಯ್ಕೆ ಮಾಡಿಕೊಂಡು ಈ ಅಧ್ಯಾಯದಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

ಇದು ಕೇವಲ ಎಂ. ಫಿಲ್ ಪದವಿಯಾಗಿದ್ದರಿಂದ ಎಲ್ಲಾ ಇತಿಹಾಸಕರರ ಬಗ್ಗೆ ಸಂಶೋಧನೆ ಮಾಡಲು ಸಾಧ್ಯವಾಗಿಲ್ಲ. ಈ ಅಧ್ಯಯನದಲ್ಲಿ ಸಾಧ್ಯವಾದಷ್ಟು ಇತಿಹಾಸಕಾರರ ಬಗ್ಗೆ ಸಂಶೋಧನೆ ಮಾಡಿ ಅಷ್ಟೇ ಪ್ರಸ್ತುತ ಅಧ್ಯಯನ ಪ್ರಬಂಧದಲ್ಲಿ ಮಂಡಿಸಲಾಗಿದೆ. ಇನ್ನು ಹಲವಾರು ಪ್ರಮುಖ ಇತಿಹಾಸಕಾರರು ಇದ್ದರೂ ಕೂಡ ಡಾ॥ ಎಸ್.ಎಸ್. ಶಟ್ಟರ್, ಡಾ॥ ಜಿ.ಎಸ್. ಘಟಪಣಜಿ, ಡಾ॥ ರಾಜಶೇಖರ, ಡಾ॥ ಸುಂದರ, ಡಾ॥ ಕೋರಿ ಶಟ್ಟರ್, ಮಹಾಬಲ್ಲೇಶ್ವರಪ್ಪ ಕೆ.ವಿ. ಬಸವರಾಜ ಇವರೆಲ್ಲರ ಬಗ್ಗೆ ಪ್ರಬಂಧ ಬರೆಯಲು ಅನೇಕ ಕಾರಣಗಳಿಂದ ಸಾಧವಾಗಿಲ್ಲ. ಇದು ಎಂ.ಫಿಲ್. ಗ್ರಂಥವಾಗಿದ್ದರಿಂದ ಹೆಚ್ಚು ವಿಷಯ ಮಂಡಿಸಲು ಆಗಲ್ಲಿಲ್ಲ. ಆದ್ದರಿಂದ ನಾನು ಈ ಬಗ್ಗೆ ವಿಷಾದಿಸುತ್ತೇನೆ. ಮುಂದಿನ ಸಂಶೋಧನೆಯಲ್ಲಿ ಇನ್ನೂ ಹೆಚ್ಚು ಇತಿಹಾಸಕಾರರ ಬಗ್ಗೆ ಬರೆಯಲು ಪ್ರಯತ್ನಿಸುತ್ತೇನೆ.

ಈ ಮೇಲೆ ತಿಳಿಸಿದ ಅನೇಕ ಇತಿಹಾಸ ತಜ್ಞರು ಕರ್ನಾಟಕ ಪ್ರಾಕ್ತನ, ಇತಿಹಾಸ, ಕಲೆ ಮತ್ತು ವಾಸ್ತು ಶಿಲ್ಪ, ಜೈನ ಧರ್ಮ ಮತ್ತು ಬೌದ್ಧ ಧರ್ಮ ಹಾಗೂ ಕರ್ನಾಟಕ ಅರಸರ ಆಡಳಿತ ಪದ್ಧತಿಗಳ ವಿವರವಾದ ಮಾಹಿತಿಯನ್ನು ನೀಡಿದ್ದಾರೆ. ಅವರ ಬಗ್ಗೆ ನನಗೆ ಪ್ರಬಂಧ ಮಂಡಿಸಲು ಅನುಮತಿ ದೊರೆಯದೆ ಇದ್ದ ಕಾರಣದಿಂದ ಅವರ ಜೀವನ ಮತ್ತು ಸಾಧನೆಗಳ ಬಗ್ಗೆ ಬರೆಯಲು ಸಾಧ್ಯವಾಗಲ್ಲಿಲ್ಲ.

ಪ್ರಸ್ತುತ ಅಧ್ಯಯದಲ್ಲಿ ತಿಳಿದುಕೊಂಡ ಇತಿಹಾಸಕಾರರು ನಮ್ಮ ನಾಡಿಗಾಗಿ ಮಾಡಿದ ಸಾಧನೆಯು ಅಪೂರ್ವವಾಗಿದೆ. ಇಂತಹ ಪ್ರಮುಖ ಇತಿಹಾಸಕಾರರನ್ನು ನಾವೆಲ್ಲರು ಸ್ಮರಿಸಬೇಕು. ಹಾಗಾಗಿ ಪ್ರತ್ಯೇಕವಾಗಿ ಕರ್ನಾಟಕ ಇತಿಹಾಸಕಾರರ ಬಗ್ಗೆ ಆಧಾರಗಳು ಸಿಗದೆ ಇದ್ದಾಗ ಸಾಧ್ಯವಾದಷ್ಟು ಮಾಹಿತಿಯನ್ನು ಸಂಗ್ರಹಿಸಿ. ಇವರೆಲ್ಲರ ಬಗ್ಗೆ ಪ್ರಬಂಧವನ್ನು ಸಿದ್ಧಪಡಿಸಿ ಮಂಡಿಸಲಾಗಿದೆ.

ಪ್ರಸ್ತುತ ಅಧ್ಯಯದಲ್ಲಿ ಈ ಪ್ರಮುಖ ಇತಿಹಾಸಕಾರರ ಜೀವನ ಹಾಗೂ ಸಾಧನೆಗಳ ಬಗ್ಗೆ ತಿಳಿಸಲು ಪ್ರಯತ್ನಿಸಲಾಗಿದೆ. ಹಾಗೂ ತಿಳಿದುಕೊಳ್ಳುವುದು ಕುತೂಹಲಕಾರಿಯು ಮತ್ತು ಆಸಕ್ತಿದಾಯಕವೂ ಆಗಿದೆ.

* * *

# ಗ್ರಂಥಋಣ


೧. ಘಾಲಾಕ್ಷ : ಸಮಗ್ರ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ ಆರಂಭದಿಂದ ಕ್ರಿ.ಶ. ೨೦೦೫ ವರೆಗೆ ಶಶಿ ಪ್ರಕಾಶನ, ತುಮಕೂರು-೨೦೦೦

೨. ಭಟ್ ಎಲ್. : ಕರ್ನಾಟಕದ ಇತಿಹಾಸ ವಿಜಯಬುಕ್ ಡಿಪೋ, ಗದಗ

೩. ಅಪರಂಜಿ ಎನ್.ಆರ್. : ಕರ್ನಾಟಕದ ಇತಿಹಾಸ ವಿಜಯಬುಕ್ ಡಿಪೋ, ಗದಗ

೪. ಸೂರ್ಯನಾಥ ಕಾಮತ : ಕರ್ನಾಟಕ ಕೈಗನ್ನಡಿ ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೫. ಶೇಕ ಅಲಿ. ಬಿ. : ಕರ್ನಾಟಕ ಚರಿತ್ರೆ ಭಾಗ-೦೫ ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೭

೬. ಘಾಲಾಕ್ಷ : ಕರ್ನಾಟಕ ಇತಿಹಾಸ ಸಂಶೋಧನೆ ಶಶಿ ಪ್ರಕಾಶನ, ತುಮಕೂರು-೨೦೦೦

೭. ವೆಂಕಟರತ್ನಂ ಎ.ವಿ. ಪದ್ಮ ಎಂ.ಬಿ. : ಇತಿಹಾಸ ಸಂಶೋಧನಾ ಮಾರ್ಗ, ಬೆಂಗಳೂರು ಪ್ರಿಂಟಿಂಗ್ ಆ್ಯಂಡ್ ಪಬ್ಲಿಷಿಂಗ್ ಕಂಪನಿ, ಬೆಂಗಳೂರು-೨೦೦೩

೮. ಸುಮಾಶಂಕರ್ : ಪ್ರಪಂಚದ ಪ್ರಮುಖ ಇತಿಹಾಸಕಾರರು ಚೇತನ ಬುಕ್ ಹೌಸ್, ಮೈಸೂರು.


ಅಂತರಜಾಲ ಮಾಹಿತಿ ಸಂಗ್ರಹಣೆ


೯. ಧನವಂತ ಹಾಜವಗೋಳ : ಶೋಧ ಪ್ರತಿಶೋಧ, ಮಹಾದೇವಿ ಪ್ರಕಾಶನ, ಧಾರವಾಡ-೨೦೦೭

೧೦. ಸರ್ವೋದಯ ಶಿವಮತ್ರ ಎಸ್. : ಕರ್ನಾಟಕ ಹರಿಕಾರ ಶ್ರೀ ರಂಗನಾಥ ರಾಮಚಂದ್ರ ದಿವಾಕರ, ಪ್ರಕಾಶನ ಸುಧಾಗೌತಮ, ಯಾದಗಿರಿ, ಗುಲಬರ್ಗಾ ಜಿಲ್ಲೆ.

೧೧. ಪಾಟೀಲ್ ಎಂ.ಬಿ. : ಕರ್ನಾಟಕ ರಾಜ್ಯ ಗ್ಯಾಸೆಟಿಯ ಕಲಬುರ್ಗಿ ಜಿಲ್ಲೆ, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು.

೧೨. ಸುರೇಶ. ಬಿ. ಹೂಗಾರ : ಕರ್ನಾಟಕ ಪ್ರಮುಖ ಐತಿಹಾಸಿಕ ಸ್ಥಳಗಳು ವಾಸನ್ ಪಬ್ಲಿಕೇಷನ್, ಬೆಂಗಳೂರು-೨೦೦೮

೧೩. ಶೇಕ ಅಲಿ. ಬಿ. : ಕರ್ನಾಟಕ ಹಿಸ್ಟರಿ ವ್ಯಾಲುಮ್ ೧-೩ ವಾಸನ್ ಪಬ್ಲಿಕೇಷನ್, ಧಾರವಾಡ

೧೪. ದಿವಾಕರ ಆರ್.ಆರ್. : ಕರ್ನಾಟಕ ಥ್ರೋ ದ ಎಜೆಸ್, ಬೆಂಗಳೂರು ೧೯೬೮

೧೫. ಶ್ರೀನಿವಾಸ ಮೂರ್ತಿ : ಹಿಸ್ಟರಿ ಆಫ್ ಕರ್ನಾಟಕ ಬೆಂಗಳೂರು


ಇತಿಹಾಸಕಾರರ ನೇರ ಸಂದರ್ಶನ

೧. ಪ್ರೊ॥ ಬಿ.ಪಿ.ಹೂಗಾರ

೨. ಡಾ॥ ಸರ್ವೋದಯ ಶಿವಮತ್ರ ಎಸ್.

